582

# 'ಮಹಿಳೆ ಮತ್ತು ಹಕ್ಕುಗಳು'

(ಕನ್ನಡ ಎಂ.ಫಿಲ್. ಪದವಿಗಾಗಿ

ಕನ್ನಡ ಹಂಪಿ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ನಿಬಂಧ)


ಸಂಶೋಧಕರು :

**ಶ್ರೀಮತಿ ಅನಿತಾ ಸಿ.**



ಚಿಗನ್ನಕ್ ಗ್ರಂಥಾಲಯ,
ಕನ್ನಡ ವಿಶ್ವವಿದ್ಯಾಲಯ, ಹಂಪಿ.



ಮಾರ್ಗದರ್ಶಕರು :

**ಶ್ರೀಮತಿ ಶ್ರೀಲತಾ ಎಂ.**









ಕರ್ನಾಟಕ ಸಂಘ(ರಿ), ಮಂಡ್ಯ.

ಎಂ.ಎಲ್. ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರ

(ಹಂಪಿಯ ಕನ್ನಡ ವಿಶ್ವವಿದ್ಯಾಲಯದ ಮಾನ್ಯತೆ ಪಡೆದಿದೆ)

2007-08

# ಮಾರ್ಗದರ್ಶಕರ ಪ್ರಮಾಣಪತ್ರ

ಶ್ರೀಮತಿ ಅನಿತಾ ಸಿ. ರವರು ನನ್ನ ಮಾರ್ಗದರ್ಶನದಲ್ಲಿ ಹಂಪಿ ಕನ್ನಡ ವಿಶ್ವವಿದ್ಯಾಲಯದ ಕನ್ನಡ ಎಂ.ಫಿಲ್. ಪದವಿಗಾಗಿ ಸಂಶೋಧನೆ ನಡೆಸಿ 'ಮಹಿಳೆ ಮತ್ತು ಹಕ್ಕುಗಳು' ಎಂಬ ಶೀರ್ಷಿಕೆಯ ಈ ನಿಬಂಧವನ್ನು ಸಿದ್ಧಪಡಿಸಿರುತ್ತಾರೆ. ಈ ನಿಬಂಧವು ಈ ಮೊದಲು ಭಾಗಶಃ ಆಗಲಿ, ಪೂರ್ಣವಾಗಿ ಆಗಲಿ ಬೇರೆ ಯಾವುದೇ ಡಿಗ್ರಿ, ಡಿಪ್ಲೋಮ ಅಥವಾ ಇತರೆ ಯಾವುದೇ ಪದವಿ ಪರೀಕ್ಷೆಗಳಿಗಾಗಲೀ ಒಪ್ಪಿಸಿರುವುದು ನನ್ನ ಗಮನಕ್ಕೆ ಬಂದಿಲ್ಲ.

ಶ್ರೀಮತಿ ಅನಿತಾ ಸಿ. ರವರು ಈ ನಿಬಂಧವನ್ನು ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಕನ್ನಡ ಎಂ.ಫಿಲ್. ಪದವಿಗಾಗಿ ಒಪ್ಪಿಸಲು ನನ್ನ ಸಮ್ಮತಿ ಇದೆ.

ಸ್ಥಳ : ಮಂಡ್ಯ

ದಿನಾಂಕ : 12–9–2008

**ಶ್ರೀಮತಿ ಶ್ರೀಲತಾ ಎಂ.,** ಎಂ.ಎ.,ಎಂ.ಫಿಲ್.,
ಕನ್ನಡ ಉಪನ್ಯಾಸಕಿ,
ಎಚ್.ಕೆ. ವೀರಣ್ಣಗೌಡ ಕಾಲೇಜು, ಮದ್ದೂರು.



# ಅಭ್ಯರ್ಥಿಯ ಪ್ರಮಾಣಪತ್ರ

ಹಂಪಿಯ ಕನ್ನಡ ವಿಶ್ವವಿದ್ಯಾಲಯದ ಮಾನ್ಯತೆ ಪಡೆದಿರುವ ಮಂಡ್ಯದ ಕರ್ನಾಟಕ ಸಂಘವು ನಡೆಸುತ್ತಿರುವ ಎಂ.ಎಲ್. ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರದಲ್ಲಿ 2007–08ನೇ ಸಾಲಿಗೆ ಕನ್ನಡ ಎಂ.ಫಿಲ್. ಅಭ್ಯರ್ಥಿಯಾಗಿ ನಾನು ಪ್ರವೇಶ ಪಡೆದಿರುತ್ತೇನೆ. ನನ್ನ ಎಂ.ಫಿಲ್. ಅಧ್ಯಯನದ ಅಂಗವಾಗಿ ಸಂಶೋಧನಾ ನಿಬಂಧ ರಚಿಸಲು 'ಮಹಿಳೆ ಮತ್ತು ಹಕ್ಕುಗಳು' ವಿಷಯವನ್ನು ಆಯ್ಕೆ ಮಾಡಿಕೊಂಡು ಶ್ರೀಮತಿ ಶ್ರೀಲತಾ ಎಂ., ರವರ ಮಾರ್ಗದರ್ಶನದಲ್ಲಿ ಸಂಶೋಧನೆ ನಡೆಸಿ ಈ ನಿಬಂಧವನ್ನು ರಚಿಸಿರುತ್ತೇನೆ.

ಈ ನಿಬಂಧವನ್ನಾಗಲೀ, ನಿಬಂಧದ ಅಧ್ಯಾಯಗಳಾಗಲೀ ಬೇರೆ ಯಾವ ಗ್ರಂಥಗಳು ಹಾಗೂ ನಿಯತಕಾಲಿಕೆಗಳಲ್ಲಿ ಪ್ರಕಟಿಸಿಲ್ಲವೆಂದು ಈ ಮೂಲಕ ದೃಢೀಕರಿಸುತ್ತಿದ್ದೇನೆ.

ಕನ್ನಡ ವಿಶ್ವವಿದ್ಯಾಲಯವು ನೀಡುವ ಕನ್ನಡ ಎಂ.ಫಿಲ್. ಪದವಿಗಾಗಿ ಈ ನಿಬಂಧವನ್ನು ಒಪ್ಪಿಸುತ್ತಿದ್ದೇನೆ.

ಸ್ಥಳ : ಮಂಡ್ಯ

ದಿನಾಂಕ : 12–9–2008

ಅನಿತಾ ಸಿ.

**ಶ್ರೀಮತಿ ಅನಿತಾ ಸಿ., ಎಂ.ಎ.,**

ಕನ್ನಡ ಎಂ.ಫಿಲ್. ವಿದ್ಯಾರ್ಥಿನಿ,

ಎಂ.ಎಲ್. ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರ

(ಹಂಪಿಯ ಕನ್ನಡ ವಿಶ್ವವಿದ್ಯಾಲಯದ ಮಾನ್ಯತೆ ಪಡೆದಿದೆ)

ಕರ್ನಾಟಕ ಸಂಘ(ರಿ), ಮಂಡ್ಯ.

## ಪರಿವಿಡಿ

## ಮಹಿಳೆ ಮತ್ತು ಹಕ್ಕುಗಳು





# ಅಧ್ಯಾಯ - 1

## ಮಹಿಳಾ ಹಕ್ಕುಗಳ ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

ಪೀಠಿಕೆ :

"ಪಕ್ಷಿಗೆ ಹೇಗೆ ಒಂದೇ ರೆಕ್ಕೆಯಿಂದ ಹಾರುವುದು ಅಸಾಧ್ಯವಾಗಿರುತ್ತದೆಯೋ ಹಾಗೆ, ಮಹಿಳೆಯರ ಸ್ಥಿತಿಗತಿಗಳು ಉತ್ತಮಗೊಳ್ಳದ ಹೊರತು ಜಗತ್ತಿನ ಕಲ್ಯಾಣದ ಬಗ್ಗೆ ಚಿಂತಿಸುವುದು ಅಸಾಧ್ಯವಾಗಿರುತ್ತದೆ"

– *ಸ್ವಾಮಿ ವಿವೇಕನಂದ*

"ಸಮಾಜ ಎಂಬ ಪಕ್ಷಿಯು ಒಂದೇ ರೆಕ್ಕೆಯಿಂದ (ಪುರುಷರು) ಬಹುಕಾಲ ಬಾನೆತ್ತರಕ್ಕೆ ಹಾರಲಾರದು"

– *ಮಾತೃಶ್ರೀ ಶಾರದಾದೇವಿ*

ಈ ಎರಡೂ ಸಂದೇಶಗಳು ಇಂದಿಗೂ ಅರ್ಥಪೂರ್ಣ ಹಾಗೂ ಅವಶ್ಯಕ. ಮಹಿಳೆಯರನ್ನು ಇನ್ನೂ ಒಂದು ಭೋಗದ ವಸ್ತುವಾಗಿ ಉಪಯೋಗಿಸಿ ಎಸೆಯಲಾಗುತ್ತಿರುವುದು ಮತ್ತು ಸಮಾಜದ ಮುಖ್ಯವಾಹಿನಿಯಿಂದ ಅವಳನ್ನು ದೂರ ಇಟ್ಟು ಕಡೆಗಣಿಸಲಾಗುತ್ತಿರುವುದು ಪುರುಷ ಪ್ರಧಾನವಾದ ವ್ಯವಸ್ಥೆಯನ್ನು ಎತ್ತಿ ಹಿಡಿಯುತ್ತದೆ. ಮಹಿಳೆಗೆ ಯಾವಾಗಲೂ ಸ್ವಾತಂತ್ರ್ಯ ಮತ್ತು ಸ್ವಯಂ ಆಡಳಿತವನ್ನು ನಿರಾಕರಿಸುತ್ತಾ ಬಂದಿದೆ. ಈ ಲಿಂಗ ತಾರತಮ್ಯವು ಮಾನವೀಯ ಮುಖವನ್ನು ವಿಕಾರಗೊಳಿಸಿದೆ.

ಜಗತ್ತಿನ ಅತಿದೊಡ್ಡ ಪ್ರಜಾಪ್ರಭುತ್ವ ರಾಷ್ಟ್ರ ಮತ್ತು ಮಹಿಳೆಯರಿಗೆ ಉನ್ನತ ಸ್ಥಾನ ಕೊಟ್ಟಿದ್ದೇವೆ ಎಂದು ಹೇಳಿಕೊಳ್ಳುವ ಭಾರತದಲ್ಲಿ ಮಹಿಳೆಯರು ಒಟ್ಟು ಜನಸಂಖ್ಯೆಯ ಶೇಕಡ 50ರಷ್ಟನ್ನು ಪ್ರತಿನಿಧಿಸುತ್ತಾರೆ. ಅನಾದಿ ಕಾಲದಿಂದಲೂ ಭಾರತೀಯ ಮಹಿಳೆ ವೈಶಿಷ್ಟ್ಯಪೂರ್ಣವಾಗಿರುವಳು. ಸ್ನೇಹ, ಸಹನಶೀಲತೆ, ಮಮತೆ ಮುಂತಾದ ಸದ್ಗುಣಗಳ ಖನಿಯಾಗಿರುವಳು. ಮನೆಯ ಸರ್ವತೋಮುಖ ಏಳ್ಗೆಗಾಗಿ ಪರಿಶ್ರಮ ಪಡುತ್ತಾ, ಆರ್ಥಿಕವಾಗಿ ಪುರುಷನ ಸಮಾನವಾಗಿ ದುಡಿಯುತ್ತಿದ್ದಾಳೆ. ಈ ರೀತಿಯ ಮಹತ್ವವನ್ನು ಅರಿತೋ ಏನೋ ನಮ್ಮ ಪೂರ್ವಜರು ಮಾತ್ರ ಆಕೆಯ ಸ್ಥಾನಕ್ಕೆ ಗೌರವವನ್ನು ತೋರಿದ್ದಾರೆ. ನಮ್ಮ ರಾಷ್ಟ್ರೀಯತೆಯನ್ನು ಮಾತೆಗೆ ಹೋಲಿಸಿ 'ಭಾರತ ಮಾತೆ' ಎಂದೂ ಸಹ ಕರೆಯಲಾಗಿದೆ. ಆದರೂ ಸಹ ಇಂದಿನ ಭಾರತೀಯ ಮಹಿಳೆ ಶೋಷಣೆ, ಹಿಂಸಾಚಾರಗಳಿಗೆ ಬಲಿಯಾಗುತ್ತಿದ್ದಾಳೆ.

### ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

ಯಾವುದೇ ಸಮಾಜದಲ್ಲಿ ಮನುಷ್ಯನಿಗೆ ಸಹಜವಾಗಿ ಬದುಕುವ ಹಕ್ಕಿದೆ. ಸಾಮಾಜಿಕವಾಗಿ, ಸಾಂಸ್ಕೃತಿಕವಾಗಿ ಮತ್ತು ರಾಜಕೀಯವಾಗಿ ವ್ಯವಸ್ಥೆ ಮನುಷ್ಯನನ್ನು ನಿಯಂತ್ರಿಸುವಾಗ ಮನುಷ್ಯನ ಬದುಕುವ ಹಕ್ಕಿಗೆ ಭಂಗಬರಬಾರದು. ಅಲ್ಲದೆ ವ್ಯವಸ್ಥೆಯ ನಿರ್ದೇಶನಗಳು ಮನುಷ್ಯರನ್ನೇ ವಿಭಾಗ ಮಾಡುವಂತಿರಬಾರದು. ಅಂದರೆ ಲಿಂಗಾಧಾರಿತವಾಗಿ, ಜಾತಿ ಆಧಾರಿತವಾಗಿ ಅಥವಾ ಧರ್ಮಾಧಾರಿತವಾಗಿ ವಿಭಿನ್ನತೆಯನ್ನು ಸೃಷ್ಟಿಸುವುದು ಮನುಷ್ಯಪರ ಆಲೋಚನೆಯಲ್ಲ.

ಹೆಣ್ಣು-ಗಂಡು ಪರಸ್ಪರ ವಿರುದ್ಧ ವ್ಯಕ್ತಿತ್ವಗಳೆಂಬ ಕಲ್ಪನೆಯನ್ನು ಮೊದಲು ತೊಡೆದು ಹಾಕಬೇಕು. ಜೈವಿಕವಾಗಿ ಮಾತ್ರ ಗಂಡು ಹೆಣ್ಣುಗಳಲ್ಲಿ ವ್ಯತ್ಯಾಸವಿದೆ. ಗಂಡು ಗುಣ, ಹೆಣ್ಣು ಗುಣ ಎಂಬ ವ್ಯತ್ಯಾಸ ಇಲ್ಲವೇ ಇಲ್ಲ. ಆದರೆ ಪುರುಷ ಪ್ರಧಾನ ಮೌಲ್ಯ ನಿರ್ಣಯದ ಹಿನ್ನಲೆಯಲ್ಲಿ ಸಮಾಜವು ಧೈರ್ಯ-ಸಾಹಸ-ಆಕ್ರಮಣ ಶೀಲತೆಯನ್ನು ಗಂಡು ಗುಣಗಳೆಂದು, ಸಹನೆ, ಸಂಯಮ, ವಿಧೇಯತೆ, ಕೋಮಲತೆ, ಮೃದುತ್ವ ಅಬಲೆ ಹೆಣ್ಣುಗಳೆಂದೂ ಗುರುತಿಸಿಕೊಂಡಿವೆ. ಪ್ರತಿಯೊಬ್ಬ ವ್ಯಕ್ತಿಯಲ್ಲೂ ಹೆಣ್ಣು ಗುಣ ಗಂಡು ಗುಣಗಳಿವೆ. ಈ ಲಿಂಗ ಭೇದದಿಂದ ಉಂಟಾದ ಅಸಮಾನತೆಯನ್ನು ತಳ್ಳಿಹಾಕಿ, ವೈಜ್ಞಾನಿಕ ನೆಲೆಯಲ್ಲಿ ಆಕೆಯನ್ನು ಕಾಣುವುದು ಸಮಂಜಸ.

ಆದರೆ ಇತಿಹಾಸದುದ್ದಕ್ಕೂ ಪುರುಷ ಪ್ರಪಂಚದ ಅನುಭವಗಳೇ ಸಾರ್ವತ್ರಿಕವೆಂಬಂತೆ ಅಭಿವ್ಯಕ್ತಗೊಂಡು ಸ್ತ್ರೀಯರ ಅನಿಸಿಕೆ ಅನುಭವ ಸಾಧನೆಗಳು ದಾಖಲಾಗಿದೆ. ಏಕಮುಖವಾದ ಚರಿತ್ರೆ ನಮ್ಮದಾಗಿದೆ. ಪಿತೃ ಪ್ರಧಾನ ಮೌಲ್ಯಗಳು ಪುರುಷರಿಗೆ ಅನುಕೂಲವಾಗಿ ರೂಪುಗೊಂಡವು. ಮಹಿಳೆಯರು ಗುಣ-ಸ್ವಭಾವ, ಸ್ಥಾನಮಾನ ಸದಾಕಾಲ ಪುರುಷ ಕೇಂದ್ರಿತ ದೃಷ್ಟಿಕೋನದಿಂದ ಅರ್ಥೈಸಲ್ಪಟ್ಟಿವೆ. ಈ ಹಿನ್ನೆಲೆಯಲ್ಲಿ ಮಹಿಳೆಗೆ ಇರುವ ಹಕ್ಕು ಸಮಾಜದಿಂದ ದಕ್ಕಿರುವ ಹಕ್ಕುಗಳ ಬಗ್ಗೆ ವಿಶ್ಲೇಷಿಸಬೇಕಾಗಿದೆ.

ಇಂದು ಪ್ರಜಾಪ್ರಭುತ್ವ ನೆಲೆಯಲ್ಲಿ ಪ್ರತಿಯೊಬ್ಬರಿಗೂ ಹಕ್ಕು ಬಾಧ್ಯತೆಗಳನ್ನು ಕಾಣಬಹುದು. ಹಕ್ಕುಗಳೆಂದರೇನು? ಎನ್ನುವುದಕ್ಕೆ ಲಾಸ್ಕಿಯವರ ಅಭಿಪ್ರಾಯ ಈ ರೀತಿ ಇದೆ. ಹಕ್ಕುಗಳೆಂದರೆ,

"ಸಾಮಾಜಿಕ ಜೀವನದ ಅತ್ಯಗತ್ಯ ಅಂಶಗಳು" ಅವುಗಳಿಲ್ಲದಿದ್ದರೆ ಯಾವೊಬ್ಬ ವ್ಯಕ್ತಿಯೂ ಸಹ ತನ್ನ ವ್ಯಕ್ತಿತ್ವದ ಪರಿಪೂರ್ಣತೆಯನ್ನು ಪಡೆಯಲು ಸಾಧ್ಯವಿಲ್ಲ. ಇದನ್ನೇ ಸ್ಪಷ್ಟವಾಗಿ ಹೇಳುವುದಾದರೆ – 'ತನ್ನ ವ್ಯಕ್ತಿತ್ವದ ಪರಿಪೂರ್ಣತೆಯನ್ನು ಸಾಧಿಸಲು ಪ್ರತಿಯೊಬ್ಬ ವ್ಯಕ್ತಿಗೂ ಅಗತ್ಯವಾದ ಸಾಮಾಜಿಕ ಜೀವನದ ಅಂಶಗಳೇ ಹಕ್ಕುಗಳು' ಎಂದಿದ್ದಾರೆ.

ಇದರಿಂದ ಗೋಚರಿಸುವುದು ಏನೆಂದರೆ ಜೀವನ ಪರಿಪೂರ್ಣವಾಗಬೇಕಾದರೆ ಸ್ತ್ರೀ-ಪುರುಷರಿಬ್ಬರೂ ಸಮಾನ ಹಕ್ಕುಗಳನ್ನು ಸಂತೃಪ್ತಿಯಿಂದ ಅನುಭವಿಸಿದಾಗ ಮಾತ್ರ ಸಾಧ್ಯ. ಒಂದು ಬಂಡಿ ಸುಲಲಿತವಾಗಿ ಸಾಗಬೇಕಾದರೆ ಎರಡು ಚಕ್ರಗಳು ಹೇಗೆ ಸಮಾನವಾಗಿರಬೇಕೋ ಹಾಗೇ ಸಮಾಜದ ಸಮತೋಲನಕ್ಕೆ ಸ್ತ್ರೀ-ಪುರುಷರಿಬ್ಬರಿಗೂ ಸಮಾನ ಹಕ್ಕುಗಳು ಅತ್ಯಗತ್ಯವಾಗಿ ದೊರಕಿದರೆ ಮಾತ್ರ ಸಾಧ್ಯ. ಆಗ ಆಕೆಯೂ ಸಹ ಸರ್ವತೋಮುಖವಾಗಿ ಪ್ರಗತಿ ಹೊಂದಿ ಪರಿಪೂರ್ಣವೆಂದು ಹಾಗೂ ಸ್ವಾವಲಂಬಿ ಜೀವನ ನಡೆಸಲು ಸಾಧ್ಯ.

ನೈಸರ್ಗಿಕ ವರ್ಗೀಕರಣದಲ್ಲಿ ಸಮಾಜವು ಕೆಲಸಗಳನ್ನು, ಶ್ರಮವನ್ನು ತನ್ನ ಮಾನದಂಡದಿಂದಲೇ ವಿಭಜಿಸಿದೆ. ಅದರಲ್ಲಿ ಹೆಣ್ಣಿಗೆ ಹೇರುವ ಪ್ರಕ್ರಿಯೆಗಾಗಿ ಆಕೆ ಮನೆಯಲ್ಲಿಯೇ ಇರಬೇಕು. ಗಂಡು ಹೊರಗಡೆ ದುಡಿಯಬೇಕು. ಈ ವಿಭಜನೆಯಿಂದ ಹೆಣ್ಣಿಗೆ ಯಾವ ಪ್ರಯೋಜನವೂ ಆಗಲಿಲ್ಲ. ಬದಲಾಗಿ ಆ ಒಂದು ವರ್ಗೀಕರಣವೇ ಆಕೆಗೆ ಮುಳುವಾಯಿತು. ಶೋಷಣೆಗೆ ಮೂಲವಾಯಿತು. ಉತ್ಪಾದನಾ ಯಂತ್ರವಾಗಿ ಆಕೆ ಮಾರ್ಪಟ್ಟುದಲ್ಲದೆ ನಾಲ್ಕು ಗೋಡೆಗಳ ನಡುವೆ ಬಂಧಿಸಲ್ಪಟ್ಟಳು.

ಈ ಗೃಹಿಣಿ, ಮಾತೃತ್ವದ ಪಟ್ಟದೊಡನೆ ಅನೇಕ ಜೀವ ವಿರೋಧಿ ಮೌಲ್ಯಗಳು, ಆಚಾರಗಳು ಬೆಳೆದುಕೊಂಡವು. ತಾಯ್ತನ, ಪಾತಿವ್ರತ್ಯ, ಶೀಲ, ವೈಧವ್ಯ, ಬಂಜೆತನ ಮುಂತಾದವುಗಳು ವೈಭವೀಕರಣಗೊಂಡವು. ಹೊರಗೂ ಸಹ ಹೊಲಗದ್ದೆ, ಆಫೀಸು, ಕಾರ್ಖಾನೆ, ಶಾಲೆ ಮುಂತಾದ ಕಡೆಯೂ ದುಡಿಯುತ್ತಾಳೆ. ಇಂತಹ ಜೀತ ಪದ್ಧತಿಗೆ ಇನ್ನೂ ಮುಕ್ತಿ ಸಿಕ್ಕಿಲ್ಲ. ಆರ್ಥಿಕ ಸ್ವಾತಂತ್ರ್ಯವನ್ನು ಇಂದು ಮಹಿಳೆ ಪಡೆದುಕೊಂಡರೂ ಮನೆಯಲ್ಲಿಯು ಕೌಟುಂಬಿಕ ವಲಯದಲ್ಲಿ ನಡೆಯುವ ಶೋಷಣೆಗಳೂ ಸಹ ತಪ್ಪಿಲ್ಲ. ಇನ್ನೂ ಪುರುಷಾಧೀನ ಸಾಂಸ್ಕೃತಿಗೆ ಒಳಪಟ್ಟು ಹೊಸ ಬಗೆಯ ಶೋಷಣೆಯನ್ನು ಅನುಭವಿಸುತ್ತಾಳೆ. ದುಡಿಯುವ ವರ್ಗದ ಮಹಿಳೆಯರ ಸಮಸ್ಯೆಗಳು ಸಂಕೀರ್ಣವೂ ವ್ಯಾಪಕವೂ ಆಗಿದೆ. ಇದಕ್ಕೆ ಮುಕ್ತಿಯೆಂದರೆ ಆಕೆಗೆ ಸಿಗಬೇಕಾದ ಹಕ್ಕುಗಳಿಂದ ಮಾತ್ರ ಸಾಧ್ಯ.

ನಿಜಕ್ಕೂ ಇಪ್ಪತ್ತೊಂದನೆ ಶತಮಾನಕ್ಕೆ ಕಾಲಿಟ್ಟಿದ್ದರೂ ಸಹ ಜಗತ್ತಿನ ಬಹುಭಾಗದ ಮಹಿಳೆಯರ ಬದುಕು ಮಧ್ಯಯುಗದ ಕತ್ತಲೆಯಿಂದ ಮುಕ್ತವಾಗಿಲ್ಲ. ಹೆಣ್ಣು ಸದಾ ಕಾಲದಲ್ಲೂ ತಂದೆ–ಸೋದರ ಇಲ್ಲವೆ ಗಂಡನ ಇಚ್ಛೆ, ಆಜ್ಞೆಯಂತೆ ಬದುಕಬೇಕಿದೆ. ಕೌಟುಂಬಿಕ, ಸಾಮಾಜಿಕ ಬದ್ಧತೆಗಳಿರುವ ಮಹಿಳೆ ಇಂದು ಅವಕಾಶಗಳಿಗಾಗಿ ಕಾಯುತ್ತಿದ್ದಾಳೆ. ಅವಳಿಗೆ ಸರ್ಕಾರ, ಸಮಾಜ ಮಾಧ್ಯಮಗಳು ಸೂಕ್ತ ಅವಕಾಶದ ಹಕ್ಕುಗಳನ್ನು ನೀಡಬೇಕು. ಹಲವು ಬಂಧನದಿಂದ ಮುಕ್ತವಾಗಬೇಕಾದರೆ ಆಕೆ ತನ್ನದೇ ಆದ ಮಹಿಳಾ ಹಕ್ಕುಗಳಿಗಾಗಿ, ಮಾನವ ಹಕ್ಕುಗಳಿಗಾಗಿ ಅಂದರೆ ಸಾಮಾಜಿಕ, ರಾಜಕೀಯ, ಧಾರ್ಮಿಕ ಹಕ್ಕುಗಳಿಗಾಗಿ ವ್ಯಾಪಕ ಹೋರಾಟ ನಡೆಸಬೇಕು. ಇಲ್ಲದಿದ್ದರೆ ಹೆಣ್ಣಿಗೆ ಬದುಕುವ ಹಕ್ಕು ಕೂಡ ಉಳಿಯುವುದಿಲ್ಲ.

ಶತಮಾನಗಳು ಸರಿದಂತೆ ಭಾರತದಲ್ಲಿ ಲಕ್ಷಾಂತರ ಮಂದಿ ಮಹಿಳೆಯರ ಜೀವನದಲ್ಲಿ ಕ್ರಾಂತಿಕಾರರ ಬದಲಾವಣೆಗಳು ಕಂಡು ಬಂದಿವೆ. ಭಾರತದಲ್ಲಿ ಮಹಿಳೆ ಮತ್ತು ಹಕ್ಕುಗಳು ಹಾಗೂ ಅವುಗಳು ರಾಜಕೀಯವಾಗಿ, ಧಾರ್ಮಿಕವಾಗಿ ಹಾಗೂ ಸಂವಿಧಾನತ್ಮಕವಾಗಿ ದೊರೆಯುತ್ತಿವೆಯೇ, ಅದರಿಂದ ಆಕೆಯ ಬದುಕು ಪರಿಪೂರ್ಣತೆಯನ್ನು ಕಂಡಿದೆಯೇ ಎನ್ನುವ ವ್ಯಾಪ್ತಿಯಲ್ಲಿ ನನ್ನ ಅಧ್ಯಯನದ ವಿಷಯವನ್ನು ಮಿತಿಗೊಳಿಸಿಕೊಂಡಿದ್ದೇನೆ.

ಹೆಣ್ಣು ಇಂದು ಎಲ್ಲಾ ಕ್ಷೇತ್ರಗಳಲ್ಲೂ ವ್ಯಾಪಕವಾಗಿ ಕೆಲಸ ಮಾಡಬೇಕಾಗಿದೆ. ಕೈಗಾರಿಕೆ, ತಂತ್ರಜ್ಞಾನ, ವಿಜ್ಞಾನ ಮುಂತಾದವುಗಳಲ್ಲಿ ವಿಸ್ತಾರವಾಗಿ ಬೆಳೆಯಬೇಕಾಗಿದೆ. ಪುರುಷನೊಡನೆ ಸ್ಪರ್ಧೆ ಮಾಡಲಿಕ್ಕೆ ಅಲ್ಲ. ತನ್ನ ಸ್ವಂತ ವ್ಯಕ್ತಿತ್ವಕ್ಕಾಗಿ ಮಾತ್ರ ಇರುವ ಅವಕಾಶಗಳನ್ನು ಸರಿಯಾಗಿ ಉಪಯೋಗಿಸಿಕೊಳ್ಳಬೇಕು. ರಾಜಕೀಯವಾಗಿ ಆಕೆಗೆ ಮೀಸಲಾತಿಯ ಹಕ್ಕನ್ನು ಕೊಟ್ಟಿದ್ದಾರೆ. ಆದರೆ ಆಕೆ ಆಯ್ಕೆಗೊಂಡರೂ, ಆಳುವವರು ಅವರ ಗಂಡಂದಿರು. ಈ ರೀತಿಯ ಹಕ್ಕುಗಳನ್ನು ಹೋಗಲಾಡಿಸಬೇಕು. ಜೊತೆಗೆ ಸಂಕೀರ್ಣವಾದ ಸ್ಥಾನಮಾನ ಪುರುಷರ ಆಲೋಚನಾ ಕ್ರಮಗಳ ಬಗ್ಗೆ ವೈವಿದ್ಯತೆಯ ನೆಲೆಯನ್ನು ಕಾಣಬೇಕು.

ಬಲವಾದ ಧಾರ್ಮಿಕ ಪ್ರಭಾವಗಳೊಂದಿಗೆ ಹಳೆಯ ನಾಗರೀಕತೆಗಳು ದೈನಂದಿನ ಜೀವನವನ್ನು ಶಕ್ತಿಯುತವಾಗಿ ಪ್ರತಿನಿಧಿಸುತ್ತಿದ್ದು, ಮಹಿಳೆಯರ ಮೇಲೆ ಅನಿವಾರ್ಯವಾದ ಸಂಪ್ರದಾಯಗಳನ್ನು ಹೇರಿಕೊಂಡು ಬಂದಿವೆ. ಆರಂಭದಲ್ಲಿ ಸುಧಾರಣಾವಾದಿಗಳಾಗಿದ್ದ ಪುರುಷರು ಮಹಿಳೆಯರ ಶಿಕ್ಷಣಕ್ಕಾಗಿ, ವಿಧವೆಯರ ಪುನರ್ ವಿವಾಹಕ್ಕಾಗಿ ಮತ್ತು ಕ್ರೂರ

ಪದ್ಧತಿಗಳಲ್ಲಿ ಒಂದಾಗಿದ್ದ ಸತಿಸಹಗಮನ ಪದ್ಧತಿಯನ್ನು ನಿಲ್ಲಿಸಲು ಹೋರಾಟ ಮಾಡಿದರು. ಗಾಂಧಿಯುಗ ಮತ್ತು ಸ್ವಾತಂತ್ರ್ಯ ನಂತರ ದಶಕಗಳು ಭಾರತೀಯ ಸಮಾಜದಲ್ಲಿ ಮಹಿಳೆಯರ ಹಲವು ಹಕ್ಕುಗಳಿಗಾಗಿ ಪ್ರಚಂಡ ಬದಲಾವಣೆಗಳನ್ನು ಕಂಡಿತು.

ಸಂವಿಧಾನವು ಸಹ ಲಿಂಗ ಸಮಾನತೆಯನ್ನು ಒಂದು "ಮೂಲಭೂತ ಹಕ್ಕು" ಎಂದು ಘೋಷಿಸಿದೆ. ಆದರೆ 19ನೇ ಶತಮಾನದಲ್ಲಿನ ಮಹಿಳೆಯರ ಸ್ಥಾನಮಾನವು ತೀವ್ರ ಅವನತಿಯಿಂದ 20ನೇ ಶತಮಾನದ ಮಧ್ಯಭಾಗದಲ್ಲಿ ಮಹಿಳಾ ಹಕ್ಕುಗಳ ಸಮಾನತೆಯಲ್ಲಿ ಬದಲಾವಣೆಯು ಆಧುನಿಕ ಯುಗದಲ್ಲಿ ಮಹಿಳೆಯ ಪ್ರಗತಿಗೆ ಅನುವು ಮಾಡಿಕೊಡುವಲ್ಲಿ ಯಶಸ್ವಿಯಾಗೆವೆಯೇ ಎಂದು ಬಹಳ ಮುಖ್ಯ ಸಂಗತಿ.

ಭಾರತದ ಮಹಿಳೆಯರು ಇಂದಿಗೂ ಸಂಕೀರ್ಣವಾದ ಬದುಕನ್ನು ನಿರ್ವಹಿಸುತ್ತಿದ್ದಾರೆ. ಹಾಗೂ ಪುರುಷನಿಂದ ಆರ್ಥಿಕವಾಗಿ ಸ್ವತಂತ್ರಗೊಂಡಿಲ್ಲ. ಕೆಲವು ಸೀಮಿತ ಹಕ್ಕುಗಳಿಂದ ಮಾತ್ರ ಅವಳ ಜೀವನದಲ್ಲಿ ಬದಲಾವಣೆ ಹೊಂದಿದ್ದಾಳೆಯೆಂದರೂ ಅದು ಅಷ್ಟೇನು ಪ್ರಗತಿಯನ್ನು ಕಾಣುತ್ತಿಲ್ಲ. ವೇದಗಳ ಆರಂಭಕಾಲದಲ್ಲಿ ತಾವು ಪಡೆದಿದ್ದಂತಹ ಹಕ್ಕುಬಾಧ್ಯತೆಗಳನ್ನು ಪಡೆಯುವ ಹಂತಕ್ಕೆ ಇಂದು ಮಹಿಳೆ ಬಂದಿದ್ದಾಳೆ ಎಂದರೆ ಅತಿಶಯೋಕ್ತಿಯಾಗಲಾರದು. ಅವಳಿಗೆ ದಕ್ಕಿರುವ ಕೆಲವು ಮಾನ್ಯತೆ ಅಂದರೆ ಶಿಕ್ಷಣ, ಉದ್ಯೋಗ ಮತ್ತು ರಾಜಕೀಯದಲ್ಲಿನ ಕೆಲವು ಹಕ್ಕುಗಳ ಬಳಕೆಯಿಂದ ಶೋಷಣೆ ಕಡಿಮೆಯಾಗಿದೆ ಹಾಗೂ ಸಮಸ್ಯೆಗಳಲ್ಲಿ ಆಸಕ್ತಿ ತೋರಿ ತಮ್ಮದೇ ಆದ ಸಂಘಟನೆಗಳನ್ನು ಬೆಳೆಸಿಕೊಳ್ಳಲು ಮಹಿಳೆಯರಿಗೆ ದಿಕ್ಸೂಚಿಯನ್ನು ತೋರಿದವು. ಆದರೆ ಇದರ ಪ್ರಯೋಜನ ಹಾಗೂ ಸಿದ್ಧಿ ಕೆಲವೇ ಮಹಿಳೆಯರು ಪಡೆದರು. ಇನ್ನೂ ಬಹುಪಾಲು ಮಹಿಳೆಯರು ವಂಚಿತರಾಗುತ್ತಿದ್ದಾರೆ.

ಆರ್ಥಿಕ ಅಂಶಗಳಿಗೆ ಸಂಬಂಧಿಸಿದಂತೆ ಸಂಪಾದಿಸುವ ಮಹಿಳೆಯರಿಗಿಂತ ಸಂಪಾದನೆಯಿಲ್ಲದ ಮಹಿಳೆಯರಿಗೆ ಹೆಚ್ಚು ಹಕ್ಕುಗಳು ನಿರಾಕರಣೆಯಾಗಿದೆ. ಹಾಗೆಯೇ ಉತ್ತಮ ಆದಾಯದ ಕುಟುಂಬಗಳಿಗಿಂತ ಕೆಳ ಮತ್ತು ಮಧ್ಯಮ ಆದಾಯದ ಕುಟುಂಬಗಳಿಗೊ, ಹೆಚ್ಚು ಹಕ್ಕುಗಳು ನಿರಾಕರಣೆಗೊಂಡಿವೆ. ಸಂಪಾದಿಸುವ ಮಹಿಳೆಯರಲ್ಲೇ ವೃತ್ತಿಪರವಲ್ಲದ ಅಥವಾ ಕೆಳ ಅಂತಸ್ತಿನ ಉದ್ಯೋಗಗಳಲ್ಲಿನ ಮಹಿಳೆಯರು ವೃತ್ತಿಪರ ಹಾಗೂ ಮೇಲಂತಸ್ತಿನ ಉದ್ಯೋಗಗಳಲ್ಲಿ ನಿರತರಾದ ಮಹಿಳೆಯರಿಗಿಂತ ಕಡಿಮೆ ಹಕ್ಕುಗಳನ್ನು ಅನುಭವಿಸುತ್ತಿದ್ದಾರೆ. ಇದು ಆದಷ್ಟು ತೊಲಗಬೇಕು. ಆಗ ಮಾತ್ರ ಮಹಿಳೆಯ ಸರ್ವಾಂಗೀಣ ಪ್ರಗತಿ ಹೊಂದಲು ಸಾಧ್ಯ.

ಪುರುಷನಿಂದಲೇ ಮಹಿಳೆಯರು ಹಕ್ಕುಗಳ ನಿರಾಕರಣೆಗಿಂತಲೂ ಮಹಿಳೆಯರಿಂದ ಮಹಿಳೆಯರಿಗೆ ಹೆಚ್ಚು ಹಕ್ಕುಗಳ ನಿರಾಕರಣೆಗೆ ಒಳಗಾಗಿ ಗುರುತಿಸಲ್ಪಡುವ ಮಹಿಳೆಯರೆಂದರೆ ಅಸಹಾಯಕತೆಯ ಭಾವನೆಗಳನ್ನು ಹೊಂದಿರುವುದು, ಕೀಳರಿಮೆಯಿಂದ ಕೊರಗುವುದು, ದುರ್ಬಲವಾದ ವರ್ಚಸ್ಸುಳ್ಳುವರು ಮತ್ತು ಆರ್ಥಿಕವಾಗಿ ಪರಾವಲಂಬಿಗಳಾದವರು. ಈ ರೀತಿಯ ಅಸಮಾನತೆಯನ್ನು ತೊಡೆದು ಹಾಕಬೇಕೆಂಬ ಉದ್ದೇಶವನ್ನು ಹೊಂದಿ, ಎಲ್ಲರಿಗೂ ಎಲ್ಲಾ ತರಹದ ಮಹಿಳಾ ಹಕ್ಕುಗಳು ದೊರಕಬೇಕೆಂಬ ಆಶಯದಿಂದ ನನ್ನ ಪ್ರಬಂಧವನ್ನು ಮಂಡಿಸುತ್ತಿದ್ದೇನೆ.

ಇದರಲ್ಲಿ ಪ್ರಾಚೀನ ಭಾರತದಿಂದ ಇವತ್ತಿನವರೆಗೆ ಮಹಿಳಾ ಹಕ್ಕುಗಳ ಪ್ರಾಮುಖ್ಯತೆಯನ್ನು ತಿಳಿಸುವ ಪ್ರಯತ್ನವೂ ಸಹ ನನ್ನದಾಗಿದೆ. ಅದರಲ್ಲೂ ಭಾರತದಲ್ಲಿ ಭೂಮಿಯ ಅನುವಂಶಿಕ ಹಕ್ಕು ಮತ್ತು ಭೂ ಹಿಡುವಳಿ ಮಿತಿ ಕಾಯ್ದೆಗಳು ಮಹಿಳಾ ಅಸಮಾನತೆಗಳನ್ನು ಹುಟ್ಟು ಹಾಕಿವೆ. ಈ ಭೂ ಕಾಯ್ದೆಗಳಲ್ಲಿ ಮಹಿಳೆ ವಿರುದ್ಧದ ಲಿಂಗ ತಾರತಮ್ಯಗಳು ಇವೆ. ಭಾರತದ ಬಹುತೇಕ ರಾಜ್ಯಗಳಲ್ಲಿರುವ ಬಡವರ ಪೈಕಿ ಮಹಿಳೆಯರ ಪ್ರಮಾಣವು ವಿಭಿನ್ನವಾಗಿದೆ.

ನಿರ್ಗತಿಕ, ಕಷ್ಟಗಳ ಸಂಕೋಲೆಯಲ್ಲಿ ಸಿಲುಕಿರುವ ಮಹಿಳೆಯರ ಸಂಖ್ಯೆ ಹಲವು ರಾಜ್ಯಗಳಲ್ಲಿ ಸಾಕಷ್ಟಿದೆ. ಬಡ ಮಹಿಳೆಯರ ಸಂಖ್ಯೆ ರಾಜ್ಯದಿಂದ ರಾಜ್ಯಕ್ಕೆ ಬದಲಾಗುತ್ತಿದೆ. ಪುರುಷರಿಗಿಂತ ಮಹಿಳೆಯರೇ ಹೆಚ್ಚಾಗಿ ಕೃಷಿಯನ್ನು ಅವಲಂಬಿಸಿದ್ದಾರೆ. ಯಾಕೆಂದರೆ ಭಾರತವು ಕೃಷಿ ಪ್ರಧಾನ ದೇಶವಾಗಿದೆ. ಈ ಹಿನ್ನಲೆಯಿಂದಲೇ ಕೂಡ 'ಭೂತಾಯಿ' ಎಂಬ ರೂಪದ ಹೆಣ್ಣಿಗೆ ಭೂಮಿಯನ್ನು ಹೋಲಿಸಿರುವುದು ಕಂಡುಬರುತ್ತದೆ. ಹೀಗಾಗಿ ಗ್ರಾಮೀಣ ಮಹಿಳೆಯರೇ ಕುಟುಂಬಗಳಿಗೆ ಜೀವನಾಧಾರ ಕಲ್ಪಿಸುವ ಹೊಣೆಗಾರಿಕೆಯನ್ನು ಹೊಂದಿದ್ದಾರೆ. ಆದರೆ ಅತ್ಯಲ್ಪ ಸಂಖ್ಯೆಯ ಮಹಿಳೆಯರಿಗೆ ಭೂಮಿಯ ಶಾಸನಾತ್ಮ ಹಕ್ಕು ಇದೆ ಎನ್ನುವುದೂ ಸಹ ಗೊತ್ತಿಲ್ಲ. ಇದಕ್ಕೆ ಮುಖ್ಯ ಕಾರಣಗಳೆಂದರೆ ಮಹಿಳೆಯರ ಅಸಹಾಯಕತೆ, ಅನಕ್ಷರತೆ, ಮೂಢನಂಬಿಕೆಗಳು, ಅಂಧ ಶ್ರದ್ಧೆಗಳು, ಬಡತನ, ಆರ್ಥಿಕ ಅವಲಂಬನೆ ಇಲ್ಲದಿರುವುದು, ಧಾರ್ಮಿಕ ಸಾಂಪ್ರದಾಯಗಳು, ಸಂವಿಧಾನಾತ್ಮಕ ಹಕ್ಕುಗಳ ಲಭ್ಯತೆ ಇಲ್ಲದಿರುವುದು ಹೀಗೆ ಹಲವು ರೀತಿಯಿಂದ ಅವಳು ನಿಸ್ಸಾಹಾಯಕತೆಗೆ ಪ್ರೇರಕಗಳಾಗಿವೆ. ಜೊತೆಗೆ ವಿಳಂಬಿತ ನ್ಯಾಯಾಂಗ ಪ್ರಕ್ರಿಯೆ, ಪೋಲಿಸ್ ಸಿಬ್ಬಂದಿಯ ನಿರ್ಲಕ್ಷ್ಯ, ನೆರೆಹೊರೆಯವರ ನಿಷ್ಕ್ರಿಯತೆ, ಮುಂತಾದವುಗಳಿಂದಲೂ ಸಹ ಆಕೆ ಅನುಭವಿಸುವ ಹಕ್ಕುಗಳಿಂದ ದೂರ ಸರಿದಿದ್ದಾಳೆ.

ಈ ದಿಸೆಯಲ್ಲಿ ಭಾರತ ಸಂವಿಧಾನವು ಸ್ತ್ರೀ, ಸಮಾನತೆ ಮತ್ತು ಸ್ತ್ರೀ ಸ್ವಾತಂತ್ರ್ಯದ ಹಕ್ಕಿಗೆ ಸಂಪೂರ್ಣ ರಕ್ಷಣೆ ನೀಡಿದೆ. ಸಂವಿಧಾನದ ಪೀಠಿಕೆಯಲ್ಲಿ ಉಲ್ಲೇಖಿಸಲಾದ 'ಸಾಮಾಜಿಕ ನ್ಯಾಯ' ಎಂಬ ಪದವು ಲಿಂಗ ನ್ಯಾಯ (Gender Justice)ವನ್ನು ಸಹ ಒಳಗೊಂಡಿದೆ ಎಂದು ಸ್ವತಃ ಡಾ॥ ಬಿ.ಆರ್. ಅಂಬೇಡ್ಕರ್‌ರವರೇ ರಾಜ್ಯಾಂಗ ಸಭೆಯ ಚರ್ಚೆಯಲ್ಲಿ ಸ್ಪಷ್ಟಪಡಿಸಿದ್ದಾರೆ. ಅಲ್ಲದೆ 14ನೇ ವಿಧಿ ಪ್ರಕಾರ "ಕಾನೂನಿನ ದೃಷ್ಟಿಯಲ್ಲಿ ಎಲ್ಲರೂ ಸರಿಸಮಾನರು ಹಾಗೂ ಸೂಕ್ತ ರಕ್ಷಣೆಗೆ ಅರ್ಹರು" ಮತ್ತು 15ನೇ ವಿಧಿಯ ಪ್ರಕಾರ, "ಸರ್ಕಾರ ಯಾವುದೇ ಸಂದರ್ಭದಲ್ಲಿ ನಾಗರೀಕರ ನಡುವೆ ಲಿಂಗಾಧಾರಿತ ತಾರತಮ್ಯ ಮಾಡಬಾರದು" ಎಂಬುದನ್ನು ಖಚಿತವಾಗಿ ಸಾರಿ ಹೇಳುತ್ತದೆ. ಜೊತೆಗೆ ಸಂವಿಧಾನವು 16, 19, 21 ಮತ್ತು 32ನೇ ವಿಧಿಗಳು ನಾಗರೀಕರಿಗೆ ನೀಡುವ ಮೂಲಭೂತ ಹಕ್ಕುಗಳು ಮಹಿಳೆಯರಿಗೂ ಅನ್ವಯಿಸುತ್ತವೆ ಎಂಬುದನ್ನು ನಾವು ಮರೆಯಬಾರದು. ಇವು ಕಾರ್ಯಯೋಜಿತಗೊಳ್ಳಬೇಕದಾರೆ ಮಹಿಳಾ ಹಕ್ಕುಗಳ ಚರ್ಚೆ, ಸಂವಹನ ಗೋಷ್ಠಿಗಳು ಸಾಕಷ್ಟು ಪ್ರಮಾಣದಲ್ಲಿ ಜರುಗಬೇಕೆಂಬುದೇ ನನ್ನ ಆಶಯವಾಗಿದೆ. ಈ ಹಿನ್ನೆಲೆಯಲ್ಲಿ ನನ್ನ ಪ್ರಾಮಾಣಿಕ ಪ್ರಯತ್ನವನ್ನು ಮಹಿಳೆ ಮತ್ತು ಹಕ್ಕುಗಳು ಪ್ರಬಂಧದ ಮೂಲಕ ಪ್ರಾಮಾಣಿಕವಾಗಿ ಮಾಡುತ್ತಿದ್ದೇನೆ.

# ಅಧ್ಯಾಯ – 2

## ಪ್ರಾಚೀನ ಹಾಗೂ ವೇದಗಳ ಕಾಲದಲ್ಲಿ ಮಹಿಳಾ ಹಕ್ಕುಗಳು

ಬ್ರಿಟಿಷರು ಭಾರತವನ್ನು ಪ್ರವೇಶಿಸಿ ಆಳುವುದಕ್ಕೆ ಪ್ರಾರಂಭಿಸುವವರೆಗೆ ಇಲ್ಲಿನ ಸಮಾಜದಲ್ಲಿ ಮಹಿಳೆಯರಿಗೆ ತೀರಾ ಕೆಳಮಟ್ಟದ ಸ್ಥಾನವಿತ್ತು ಎನ್ನುವ ಭಾವನೆ ಪಾಶ್ಚಾತ್ಯ ದೇಶಗಳಲ್ಲಿ ಪ್ರಚಾರದಲ್ಲಿತ್ತು. ಈ ಭಾವನೆ ಸರಿಯಾದುದಲ್ಲ. ಕಾರಣ ಸಾಂಸ್ಕೃತಿಕ ಕ್ಷೇತ್ರದಲ್ಲಿ ಮತ್ತಾವ ರಾಷ್ಟವೂ ಭಾರತವು ಸಾಧಿಸಿದಷ್ಟು ಪ್ರಗತಿಯನ್ನು ಗಳಿಸಲಿಲ್ಲ ಮತ್ತು ಭಾರತವು ತನ್ನ ಮಹಿಳೆಯರಿಗೆ ಜೀವನದಲ್ಲಿ ಅವಶ್ಯಕವಾಗಿರುವ ಹಕ್ಕುಬಾಧ್ಯತೆ ಹಾಗೂ ಅವಕಾಶಗಳನ್ನು ಕೊಡದೆ ನಿರಾಕರಿಸಿದ್ದರೆ ಈ ಅದ್ಭುತವಾದ ಸಾಧನೆಯನ್ನು ಗಳಿಸಿ ಜಗತ್ತಿಗೆ ಸಾಂಸ್ಕೃತಿಕ ರಾಯಭಾರಿಯಾಗುವುದು ಅಸಾಧ್ಯವಾಗುತ್ತಿತ್ತು ಎಂಬುದು ಸ್ಪಷ್ಟವಾಗಿದೆ. ಒಂದು ಸಮಾಜದಲ್ಲಿ ಮಹಿಳೆಯರಿಗೆ ಕೊಡಲಾಗಿರುವ ಹಕ್ಕು ಹಾಗೂ ಸ್ಥಾನಮಾನವು ಅದರ ಸಾಮಾಜಿಕ, ಸಾಂಸ್ಕೃತಿಕ ಮತ್ತು ಆಧ್ಯಾತ್ಮಿಕ ಮಟ್ಟವನ್ನು ಸಮರ್ಪಕವಾಗಿ ತೋರಿಸುವ ನಿಜವಾದ ಸೂಚಿಯಾಗಿದೆ ಎಂದು ಹೇಳಿರುವುದು ಸರಿಯಾಗಿದೆ.

ಅತ್ಯಂತ ಪ್ರಾಚೀನ ಕಾಲದಿಂದ ಇಂದಿನವರೆಗಿನ ಮಹಿಳಾ ಹಕ್ಕುಗಳ ಅಧ್ಯಯನವು ಭಾರತೀಯ ಸ್ತ್ರೀಯರ ವಿಕಸನದ ಚರಿತ್ರೆಯೂ ಸಹ ಆಗಿದೆ. ಕಾಲಕಾಲಕ್ಕೆ ವಿಭಿನ್ನವಾದ ಹಕ್ಕುಗಳ ವ್ಯವಸ್ಥೆಗೆ ಒಳಗಾಗಿದ್ದಾಳೆ. ಪ್ರಾಚೀನ ಭಾರತದಲ್ಲಿ ಸ್ತ್ರೀಯರ ಸ್ಥಾನಮಾನಗಳು ಗೌರವಯುತ ಸ್ಥಾನದಲ್ಲಿದ್ದವು. ಗೃಹ ಕ್ಷೇತ್ರದಲ್ಲಿ ಹೇಳುವುದಾದರೆ, ಮಹಿಳೆ ಎಂಬ ಅಕ್ಷರದ ಮೇಲೆ ಗೃಹ ಜೀವನವೆಂಬ ಚಕ್ರ ತಿರುಗುತ್ತಿತ್ತು ಎಂಬ ವರ್ಣನೆಯು ಮನೆಯಲ್ಲಿ ಮಹಿಳೆಗೆ ಯಾವ ರೀತಿ ಹಕ್ಕು ಸ್ವಾತಂತ್ರ್ಯವಿತ್ತೆಂಬುದಕ್ಕೆ ಸಾಕ್ಷಿಯಾಗಿದೆ. ಕೃಷಿಯೇ ಪ್ರಧಾನವಾದ ವೃತ್ತಿಯಾಗಿದ್ದು, ಅವಿಭಕ್ತ ಕುಟುಂಬ ವ್ಯವಸ್ಥೆ ಸಾರ್ವತ್ರಿಕವಾದ್ದರಿಂದ ಸ್ತ್ರೀ–ಪುರುಷರ ನಡುವೆ ಸಂಘರ್ಷವಿರಲಿಲ್ಲ. ಮನೆಗೆಲಸವನ್ನು ನೋಡಿಕೊಳ್ಳುವುದರ ಜೊತೆಗೆ ಮಹಿಳೆಯರು ದನಕರುಗಳನ್ನು ಪೋಷಿಸುವುದು, ಪುರುಷರಿಗೆ ಕೃಷಿಯ ಕಾರ್ಯಗಳಲ್ಲಿ ನೆರವಾಗುತ್ತಿದ್ದರು. ವೈಯಕ್ತಿಕ ಹಿನ್ನೆಲೆಯಲ್ಲಿ ಯಾವುದೇ ತೆರನಾದ ಆಸ್ತಿಯ ಹಕ್ಕು ಮೂಡಿಬಾರದ್ದರಿಂದ ಆ ಕಾಲದಲ್ಲಿ ಯಾವುದೇ ಸಮಸ್ಯೆಗಳೇ ಇರಲಿಲ್ಲ. ಸಮಾನ ಕಾರ್ಯಭಾರತೆಯಿಂದ ಕೆಲಸ ಕಾರ್ಯಗಳಲ್ಲಿ ತೊಡಗಿದ್ದರು. ಇದರಿಂದ ಸ್ತ್ರೀಯರ ಶೋಷಣೆಗೆ ಅವಕಾಶವೇ ಇರಲಿಲ್ಲ.

ನಾಗರೀಕತೆಯ ಪೂರ್ವದಲ್ಲಿ ಮಹಿಳೆ ತುಂಬಾ ಶಕ್ತಿಯುತವಾಗಿದ್ದಳು. ಜೊತೆಗೆ ಮಾನವ ಧರ್ಮದಂತೆ ಇಡೀ ಪರಿವಾರವನ್ನು ಉಳಿಸಿಕೊಂಡು, ಬೆಳೆಸಿಕೊಂಡು ಹೋಗುವುದು ಹೆಣ್ಣಿನ ಹಕ್ಕಾಗಿತ್ತು. ಆಕೆಯ ದೈಹಿಕ ಬದಲಾವಣೆಯಿಂದ ಅಂದರೆ ಮುಟ್ಟಾಗುವುದು, ವಿವಾಹ, ಸಂತಾನ, ಬಾಣಂತನ ಮುಂತಾದ ಸಂದರ್ಭಗಳಲ್ಲಿ ಆಕೆಯನ್ನು ಉದಾರವಾಗಿ ಕಾಣುತ್ತಿದ್ದರು. ಅವಳ ಅವಶ್ಯಕತೆಗಳ ಪೂರೈಕೆ, ಶಾರೀರಿಕ ಆರೈಕೆ ಮಾಡಿಸಿಕೊಳ್ಳುವುದು ಹಾಗೂ ಕೆಲವು ವಿಶೇಷ ಸೌಲಭ್ಯಗಳನ್ನು ಪಡೆಯುವುದು ಆಕೆಯ ಹಕ್ಕಾಗಿತ್ತು. ಆದರೆ ನಂತರ ಲಿಂಗಾಧಾರಿತ ನೆಲೆಯಿಂದ ಇಡೀ ಮಾನವ ಜನಾಂಗವನ್ನು ಸ್ತ್ರೀ–ಪುರುಷರೆಂದು ಇಬ್ಭಾಗ ಮಾಡಿರುವುದನ್ನು ಕಾಣಬಹುದು.

ಪ್ರಾಚೀನ ನಾಗರಿಕತೆಗಳಲ್ಲಿ ಮಹಿಳೆಯ ಸಾಮಾಜಿಕ ಬದುಕನ್ನು ಕುರಿತು ಹೆಚ್ಚಿನ ಚಿಂತನೆಗಳು ನಡೆದಿಲ್ಲ. ಆದರೆ ಆಕೆಗೆ ಗೃಹ ಕ್ಷೇತ್ರಗಳಲ್ಲಿ ಅತ್ಯಂತ ಗೌರವಯುತ ಸ್ಥಾನವಿತ್ತು. ಹಾಗೆಯೇ ಪುರುಷ ದೇವತೆಗಳ ಪ್ರಾಧಾನ್ಯತೆಯನ್ನು ಸ್ತ್ರೀ ದೇವತೆಗಳಿಗೆ ನೀಡಲಾಗಿತ್ತು. ದೇವತೆಗಳ ಹೆಸರನ್ನು ಒಂಟಿಯಾಗಿ ಕರೆಯದೇ ಅವರ ಪತ್ನಿಯ ಹೆಸರಿನ ಜೊತೆಯಲ್ಲಿಯೇ ಕರೆಯುತ್ತಿದ್ದರು. ಅದರಲ್ಲಿಯೂ ಒಂದು ವಿಶಿಷ್ಟತೆಯೆಂದರೆ ಹೆಂಡತಿಯ ಹೆಸರಿನ ನಂತರವೇ ಆಯಾಯ ಪುರುಷ ದೇವತೆಯ ಹೆಸರನ್ನು ಕರೆಯುವುದು ವಾಡಿಕೆಯಲ್ಲಿತ್ತು. ಉದಾ.: ಲಕ್ಷ್ಮೀ ನರಸಿಂಹ, ಪಾರ್ವತಿ ಪರಮೇಶ್ವರ, ಉಮಾ ಮಹೇಶ, ಗಿರಿಜಾ ಶಂಕರ, ಲಕ್ಷ್ಮೀ ವೆಂಕಟೇಶ ಇತ್ಯಾದಿ.

ಶಕ್ತಿ ದೇವತೆಗಳನ್ನೆಲ್ಲಾ ಹೆಣ್ಣಿನಲ್ಲಿಯೇ ಕಾಣುವುದು ಸಹ ಪುರುಷ ಸಾಂಸ್ಕೃತಿಯ ಪ್ರಕ್ರಿಯೆಯಾಗಿತ್ತು. ಕೆಲವು ಪಂಗಡಗಳಲ್ಲಿ ತಾಯಿಯೇ ಕುಟುಂಬದ ಯಜಮಾನಿಯಾಗಿದ್ದರಿಂದ ಮಾತೃದೇವತಾರಾಧನೆ ರೂಢಿಯಲ್ಲಿರುವುದು ಕಂಡುಬರುತ್ತದೆ. ಸ್ತ್ರೀಯರನ್ನು ಧರ್ಮಪತ್ನಿಯೆಂದು ಹೇಳಲಾಗುತ್ತದೆ. ಧಾರ್ಮಿಕ ಕಾರ್ಯಗಳನ್ನು ನೆರವೇರಿಸುವಾಗ ಪುರುಷನು ತನ್ನ ಪತ್ನಿಯೊಂದಿಗೆ ನೆರವೇರಿಸಬೇಕೆಂಬ ನಿಯಮವೂ ಸಹ ಇತ್ತು. ಹಾಗಾಗಿ ಪತ್ನಿಯು ಪತಿಯ ಅರ್ಧಾಂಗಿ ಎಂದು ಕರೆಯಲಾಗುತ್ತಿತ್ತು. ಸ್ತ್ರೀಗೆ ಮಹತ್ವದ ಅಂತಸ್ತನ್ನು ಸಮಾನತೆಯನ್ನು ನೀಡಿದ ಪ್ರತೀಕವಾಗಿದೆ.

ಪ್ರಾಚೀನ ನಾಗರಿಕತೆಯಲ್ಲಿ ಮಹಿಳೆಯೇ ಕುಟುಂಬದ ಹಿರಿಯಳಾಗಿದ್ದು ಸಮಸ್ತ ಆಸ್ತಿಗೆ ಒಡೆಯಳಾಗಿದ್ದಳು. ಆಸ್ತಿಯ ಉತ್ತರಾಧಿಕಾರದ ಹಕ್ಕನ್ನು ಹೊಂದಿದ್ದು, ಮನೆಯ ಯಜಮಾನಿಯೆಂದು ಪರಿಗಣಿಸಲ್ಪಡುತ್ತಿದ್ದಳು. 'ಫೆಡ್ರಿಕ್ ಏಂಜಲ್ಸ್'ನು ತಾಯಿಯ ಹಕ್ಕನ್ನು ಮಾನ್ಯ ಮಾಡಿದ್ದಾನೆ. ಉತ್ತಮ ಸಮಾಜವನ್ನು ಕಾಣಬೇಕಾದರೆ ಸ್ತ್ರೀಗೆ ಅಂದರೆ ತಾಯಿಗೆ ಒಳ್ಳೆಯ ಗೌರವ ಹಾಗೂ ಮುಖಂಡತ್ವದ ಸ್ಥಾನವನ್ನು ನೀಡುವುದು ಯುಕ್ತವಾದದು ಎಂದು ವಾದಿಸಿದ್ದಾನೆ.

ಪ್ರಥಮ ಮಹಿಳಾ ಆಡಳಿತಗಾರ್ತಿಯನ್ನು ಕೊಟ್ಟ ಕೀರ್ತಿ ಈಜಿಪ್ಟ್‌ನ ನಾಗರಿಕತೆಯಲ್ಲಿ ಕಂಡುಬರುತ್ತದೆ. ಸ್ತ್ರೀಯರಿಗೆ ಸಮಾನ ಹಕ್ಕುಗಳು ಪಿತ್ರಾರ್ಜಿತ ಆಸ್ತಿಯಲ್ಲಿ ಹೆಣ್ಣು ಮಕ್ಕಳಿಗೆ ಸಮಪಾಲು ನೀಡಬೇಕೆಂದು ಮೆಸಪೋಟೊಮಿಯಾ ನಾಗರಿಕತೆಯಲ್ಲಿ ದೊರೆತಿರುವ 'ಹಮ್ಮುರಬಿ ಶಾಸನ' ಹೇಳುತ್ತದೆ. ಹಾಗೆಯೇ ಚೀನಾದ ನಾಗರಿಕತೆಯಲ್ಲಿಯೂ ಸ್ತ್ರೀಯರು ಮತ್ತು ಪುರುಷರಿಗೆ ಸಮಾಜದಲ್ಲಿ ಸಮಾನ ಹಕ್ಕುಗಳಿರಬೇಕೆಂದು ಪ್ರತಿಪಾದಿಸಿರುವುದನ್ನು ತತ್ವಜ್ಞಾನಿ 'ಕನ್‌ಫ್ಯೂಸಿಯಸ್'ನ ಬರಹಗಳಿಂದ ತಿಳಿದು ಬರುತ್ತದೆ.

ಬೆಬಿಲೋನಿಯ ಮತ್ತು ಈಜಿಪ್ಟ್‌ಗಳಲ್ಲಿ ಹೆಣ್ಣು ಸಂಪೂರ್ಣ ಸ್ವಾತಂತ್ರ್ಯವನ್ನು ಅನುಭವಿಸಿ ಉನ್ನತ ಸ್ಥಾನಮಾನಗಳನ್ನು ಹೊಂದಿರುವುದು ಕಂಡುಬರುತ್ತದೆ. ಕ್ರಿ.ಪೂ. 15ನೇ ಶತಮಾನದ ಹಮ್ಮುರಬಿ (ಬೆಬಿಲೋನಿಯಾದ ರಾಜ) ಶಾಸನದಲ್ಲಿ ವಿವಾಹಿತ ಮಹಿಳೆಗೆ ವೈಯಕ್ತಿಕ ಮತ್ತು ಆರ್ಥಿಕ ಸ್ವಾತಂತ್ರ್ಯದ ಹಕ್ಕನ್ನು ನೀಡಲಾಗಿತ್ತು. ವಿವಾಹ ಆಕೆಯ ಇಚ್ಛೆಯನ್ನು ಆಧರಿಸಿತ್ತು. ಆ ಕಾಲದಲ್ಲಿ ಕನ್ಯಾಶುಲ್ಕದಲ್ಲಿ ಸೇರಿದ ಆಸ್ತಿಗಳ ಮೇಲೆಯೂ ಆಕೆಗೆ ಅಧಿಕಾರವಿತ್ತು. ಯಾವುದೇ ಹೆಣ್ಣು-ಗಂಡನ ಕಾರ್ಯದ, ದಬ್ಬಾಳಿಕೆ ಶೋಷಣೆಗಳನ್ನು ಸಹಿಸಿಕೊಂಡು ಬದುಕಬೇಕಾಗಿರಲಿಲ್ಲ. ಆತನಿಗೆ ವಿಚ್ಛೇದನ ಕೊಟ್ಟು ತನಗೆ ಸೇರಿದ ಆಸ್ತಿಯೊಡನೆ ತವರಿಗೆ ಮರಳುವ ಹಕ್ಕನ್ನು ಹೊಂದಿದ್ದಳು.

ಈಜಿಪ್ಟ್ ಇತಿಹಾಸಕಾರ ಹೆರೋಡೊಟಸ್‌ನ ಹೇಳಿಕೆಯಂತೆ ಪ್ರಾಚೀನ ಈಜಿಪ್ಟ್‌ನಲ್ಲಿ ಮಹಿಳೆಯರು ಹಣಕಾಸಿನ ವ್ಯವಹಾರದಲ್ಲಿಯೂ ಪಾಲ್ಗೊಳ್ಳುತ್ತಿರುವುದಾಗಿ ತಿಳಿದು ಬರುತ್ತದೆ. ಅಲ್ಲದೆ ಈತನೇ ಸ್ತ್ರೀ–ಪುರುಷರ ಲಿಂಗಗಳ ನಡುವಿನ ಸಂಬಂಧವನ್ನು ಚರ್ಚಿಸಿದ್ದಾನೆ. ಅದಕ್ಕೆ ಅಥೆನ್ಸ್‌ನ ಮಹಿಳೆಯರ ಸಾಮಾಜಿಕ ಬದುಕನ್ನು ನಿದರ್ಶನಕ್ಕೆ ತೆಗೆದುಕೊಂಡಿದ್ದಾನೆ. ಇದರಿಂದ ಅವರು ಸ್ವತಂತ್ರ ಹಾಗೂ ಗೌರವಯುತ ಸ್ಥಾನವನ್ನು ಹೊಂದಿದ್ದ ಎಂಬುದು ತಿಳಿದು ಬರುತ್ತದೆ.

ಆದರೆ ಗ್ರೀಸ್‌ನಲ್ಲಿ ಇದಕ್ಕೆ ವಿರುದ್ಧವಾದ ಅಂದರೆ ಸ್ತ್ರೀಯರು ಮಕ್ಕಳನ್ನು ಹೆರುವ ಗುಲಾಮರಂತಿದ್ದರು. ಮನೆಗಳಿಗೆ ಮಾತ್ರ ಸೀಮಿತರಾಗಿದ್ದು, ಯಾವುದೇ ಹಕ್ಕು ಬಾಧ್ಯತೆಗಳನ್ನು ಹೊಂದಿರದೆ ಅಶಿಕ್ಷಿತರಾಗಿದ್ದರು ಎಂಬುದು ತಿಳಿದು ಬರುತ್ತದೆ. ಇಲ್ಲಿ ಸ್ತ್ರೀಯರ ಸಾಮಾಜಿಕ ಬದುಕು ದಯನೀಯವಾಗಿರುವುದು ಕಂಡುಬರುತ್ತದೆ. ಗಂಡಸರ ಚರಾಸ್ತಿಯಂತೆ ಹೆಂಗಸರನ್ನು ನಡೆಸಿಕೊಳ್ಳಲಾಗುತ್ತಿತ್ತು. ಕೆಲವು ಸ್ತ್ರೀಯರು ಬುದ್ಧಿವಂತರಾಗಿದ್ದು ಉನ್ನತ ಸಭೆಗಳಲ್ಲಿ, ಆಧ್ಯಾತ್ಮಿಕ ಚರ್ಚೆಗಳಲ್ಲಿ ಮತ್ತು ರಾಜನೀತಿಯಲ್ಲಿ ಭಾಗವಹಿಸುತ್ತಿದ್ದರೂ ಸಹ ಸಾಮಾಜಿಕವಾಗಿ ಅತಿ ಕೆಳಸ್ತರದ ಸ್ಥಾನಮಾನವನ್ನು ಹೊಂದಿದ್ದರು.

ಪ್ರಾಚೀನ ರೋಮ್ನಲ್ಲಿ ಮಹಿಳೆಯರ ಸಾಮಾಜಿಕ ಜೀವನ ಭಾರತೀಯ ಮನುವಾದಿ ಆಲೋಚನೆಗಳಿಗಿಂತ ಭಿನ್ನವಾಗಿರಲಿಲ್ಲ. ಬಾಲ್ಯದಲ್ಲಿ ತಂದೆ, ಅನಂತರದಲ್ಲಿ ಅಣ್ಣ, ವಿವಾಹ ನಂತರದಲ್ಲಿ ಗಂಡನ ಆಶ್ರಯ, ವಯಸ್ಸಾದ ಕಾಲಕ್ಕೆ ಮಗನ ಆಶ್ರಯದಲ್ಲಿ ಮಹಿಳೆಯರ ಬದುಕು ಅವಲಂಬಿತವಾಗಿತ್ತು. ಕಾನೂನುಗಳು ಸಹ ಮಹಿಳೆಯರನ್ನು ಅಜ್ಞಾನಿಗಳೆಂದು ಪರಿಗಣಿಸಿದ್ದವು. ಅವಳ ತಪ್ಪಿಗೆ ಶಿಕ್ಷೆಯೊಡನೆ ತಿಳುವಳಿಕೆ ಇಲ್ಲದೆ ಮಾಡಿದ್ದಾಳೆಂದು ತೀರ್ಪು ಕೊಡುತ್ತಿದ್ದರು. ಅಲ್ಲಿನ ಮಹಿಳೆ ಎರಡು ಸಂದರ್ಭದಲ್ಲಿ ಪುರುಷನ ಪಾಲಿಗೆ ಸಂತೋಷದಾಯಕಳಾಗಿ ಕಾಣುತ್ತಾಳೆ. (1) ಮದುವೆಯ ದಿನ (2) ಸಾವಿನ ದಿನ. ಇದರಿಂದಲೇ ಗೊತ್ತಾಗುತ್ತದೆ ಮಹಿಳೆಯನ್ನು ಒಂದು ಅನಿಷ್ಟವೆಂದು ತಿಳಿದು ಆಕೆ ಸೇವಕಿಯೇ ವಿನಾ ಬೇರಾವ ಅರ್ಹತೆಗಳಿಲ್ಲವೆಂದು ಪರಿಗಣಿಸುತ್ತಿದ್ದರು.

ಧಾರ್ಮಿಕ ರಂಗದಲ್ಲಿಯೂ ಮಹಿಳೆಯರು ಪುರುಷರಿಗೆ ಸರಿಸಮಾನವಾಗಿದ್ದು, ಉತ್ತಮ ಸ್ಥಾನವನ್ನು ಹೊಂದಿದ್ದಳು. ಪತ್ನಿಯಾದವಳು ಪೂರ್ಣ ಹಕ್ಕುಗಳನ್ನು ಹೊಂದಿದ್ದಳಲ್ಲದೆ ಧಾರ್ಮಿಕ ಸಂಸ್ಕಾರಗಳಲ್ಲಿ ತನ್ನ ಪತಿಯೊಂದಿಗೆ ನಿಯಮಿತವಾಗಿ ಭಾಗವಹಿಸುತ್ತಿದ್ದಳು. ವಾಸ್ತವದಲ್ಲಿ ಸಮಾನ ಪಾಲುದಾರಳಾದ ಪತ್ನಿಯು ತನ್ನ ಪತಿಯೊಂದಿಗೆ ಭಾಗವಹಿಸದೆ ಆಚರಿಸುವ ಧಾರ್ಮಿಕ ಕ್ರಿಯೆಗಳ ನಿರ್ವಹಣೆ ಅಸಿಂಧು ಎಂದು ಪರಿಗಣಿಸಲಾಗುತ್ತಿತ್ತು.

ಆದರೆ ಪ್ಲೇಟೋ, ಗ್ರೀಕರು ತಮ್ಮ ಸ್ತ್ರೀಯರನ್ನು ಬಹು ಅಸಡ್ಡೆಯಿಂದ ಕಾಣುತ್ತಿದ್ದರೆಂದು ಹೇಳುತ್ತಾನೆ. ಮಹಿಳೆಯರಿಗೆ ವೈಯಕ್ತಿಕವಾಗಿ ಅನುಭವಿಸುವ ಯಾವುದೇ ಹಕ್ಕು ಬಾಧ್ಯತೆಗಳಿಲ್ಲದೆ, ಜೀವನ ಪರ್ಯಂತ ಪರರ ರಕ್ಷಣೆಯಲ್ಲಿ ಇರಬೇಕಾಗಿತ್ತು. ಶಿಕ್ಷಣವೂ ಕೂಡ ಈ ಬಗೆಯ ಕಾರ್ಯಕ್ಕೆ ಸಿದ್ಧಗೊಳಿಸುವ ಉದ್ದೇಶವನ್ನೇ ಹೊಂದಿತ್ತು. ಗ್ರೀಸಿನ ಸ್ತ್ರೀಗೆ ತನ್ನ ತಂದೆ–ತಾಯಿಯ ಆಸ್ತಿಯಲ್ಲಾಗಲಿ ಅಥವಾ ತನ್ನ ಪತಿಯ ಆಸ್ತಿಯಲ್ಲಾಗಲಿ ಹಕ್ಕುಗಳಿರಲಿಲ್ಲ. ಬದಲಾಗಿ ಆಕೆಯೇ ಪುರುಷನ ಆಸ್ತಿಯಾಗಿದ್ದಳು.

ನಂತರ ನಾಗರಿಕತೆ ಮುಂದುವರಿದ ಹಾಗೆ ನಗರ ಜೀವನಕ್ಕೆ ಕಾಲಿಡುತ್ತಿದ್ದಂತೆ ವ್ಯವಸ್ಥೆಗೆ ಹೊಂದಿಕೆಯಾಗಿ ನಡೆಯಲಾರಂಭಿಸಿ ಗಂಡ ಹೀಗೇ ಇರಬೇಕು, ಹೆಂಡತಿಯಾದವಳೂ ಸಹ ಹೀಗೇ ಇರಬೇಕೆಂಬ ಸಂಸ್ಕೃತಿ ಸಾಗಿ ಸ್ತ್ರೀ ನಿಕೃಷ್ಟ ಸ್ಥಿತಿಗೆ ಒಳಗಾದಳು. ಹೆಣ್ಣನ್ನು ಎರಡನೇ ಪ್ರಜೆಯಾಗಿ ಕಾಣುವುದು ತಿಳಿದು ಬರುತ್ತದೆ. ಇದೇ ಮುಂದಿನ ವೇದಗಳ ಕಾಲದಲ್ಲಿಯೂ ಅಲ್ಲಲ್ಲಿ ಕಂಡುಬರುತ್ತದೆ.

**ವೇದಗಳ ಕಾಲದಲ್ಲಿ ಮಹಿಳಾ ಹಕ್ಕುಗಳು :**

ವೇದಗಳ ಆರಂಭ ಕಾಲದಲ್ಲಿ ಮಹಿಳೆಯರ ಜೀವನ ಸ್ಥಿತಿ ಹಾಗೂ ಬದುಕುವ ಹಕ್ಕು ಉತ್ತಮವಾಗಿರುವುದು ಕಂಡುಬರುತ್ತದೆ. ವೇದಗಳ ಹಾದಿಯಲ್ಲಿ ಮಹಿಳೆಯರು ತಮ್ಮ ಕೌಟುಂಬಿಕ ಪರಿಸರದಲ್ಲಿ ಧಾರ್ಮಿಕ ಮತ್ತು ಸಾಮಾಜಿಕ ಬದುಕಿನಲ್ಲಿ ಸಾಕಷ್ಟು ಪ್ರಮಾಣದಲ್ಲಿ ಸ್ವಾತಂತ್ರ್ಯ ಮತ್ತು ಸವಲತ್ತುಗಳನ್ನು ಅನುಭವಿಸುತ್ತಿದ್ದರು. ಆರ್ಥಿಕ ಕ್ಷೇತ್ರದಲ್ಲಿಯೂ ಪ್ರಮುಖ ಪಾತ್ರ ವಹಿಸುತ್ತಿದ್ದು, ಧಾರ್ಮಿಕ ಆಚರಣೆಗಳಲ್ಲಿ ಭಾಗವಹಿಸುತ್ತಾ ಉತ್ತಮ ಸ್ಥಾನ ಹೊಂದಿದ್ದರು. ಅದರಲ್ಲೂ ಋಗ್ವೇದ ಕಾಲದಲ್ಲಿ ಸ್ತ್ರೀಯರನ್ನು ಶಕ್ತಿ ಹಾಗೂ ಔದಾರ್ಯದ ಪ್ರತೀಕವಾಗಿ ಕಾಣುತ್ತಿದ್ದರು. ಜನಗಳ ಮನಸ್ಸಿನಲ್ಲಿ ಸ್ತ್ರೀ ಬಗ್ಗೆ ಅತ್ಯುತ್ತಮ ಭಾವನೆಗಳಿರುವುದರ ಜೊತೆಗೆ ಸಮಾನ ಭಾವದಿಂದ ಕಾಣುವ ಪ್ರವೃತ್ತಿ ಇತ್ತು.

ವೇದಗಳ ಪ್ರಾರಂಭದ ಕಾಲದ ಸಮಾಜದಲ್ಲಿ ಮಹಿಳೆಯ ಜೀವನ ವಿಧಾನ ಇತರ ಕಾಲಗಳಿಗಿಂತ ಉತ್ತಮವಾಗಿತ್ತು. ಆಕೆಗೆ ಸಾಮಾಜಿಕ, ಶೈಕ್ಷಣಿಕ, ರಾಜಕೀಯ, ಆರ್ಥಿಕ ಮತ್ತು ಧಾರ್ಮಿಕ ಚಟುವಟಿಕೆಗಳಲ್ಲಿ ಯಾವ ನಿರ್ಬಂಧವೂ ಇಲ್ಲದೆ ಸ್ವತಂತ್ರವಾಗಿ ಭಾಗವಹಿಸುವ ಹಕ್ಕನ್ನು ಹೊಂದಿದ್ದಳು. ಆಕೆಯ ವಿವಾಹವೂ ಸಹ ಕಡ್ಡಾಯವಾಗಿರಲಿಲ್ಲ ಎಂಬುದು ಬಹುಮುಖ್ಯ ಅಂಶ. ಯಾವ ಸಾರ್ವಜನಿಕ ನಿಂದೆಗೂ ಗುರಿಯಾಗದೆ, ಭಯವಿಲ್ಲದೆ ತಂದೆ-ತಾಯಿಗಳ ಜೊತೆ ಇರಬಹುದಿತ್ತು.

ಶಿಕ್ಷಣ ಕ್ಷೇತ್ರದಲ್ಲಿಯೂ ಮಹಿಳೆಯರಿಗೆ ಸಮಾನ ಅವಕಾಶಗಳಿದ್ದವು. ಅನೇಕ ಮಹಿಳೆಯರು ಅಗಾಧ ಪರಿಜ್ಞಾನ ಹೊಂದಿದ್ದರು. ಆರ್ಥಿಕ ಕ್ಷೇತ್ರದಲ್ಲಿಯೂ ಸ್ವತಂತ್ರವಾದ ಹಕ್ಕನ್ನು ಹೊಂದಿದ್ದರು. ಮಹಿಳೆ ಕೂಲಿಗಾಗಿ ಅಥವಾ ವೇತನಕ್ಕಾಗಿ ದುಡಿಯಬೇಕಾದ ಪರಿಸ್ಥಿತಿ ಇರಲಿಲ್ಲ. ಆರ್ಥಿಕ ಉತ್ಪಾದನೆ ಕುಟುಂಬದೊಳಗೇ ನಡೆಯುತ್ತಿತ್ತು. ಬಟ್ಟೆ ನೂಲುವುದು, ನೇಯುವುದು, ಕೃಷಿ ಕಾರ್ಯಗಳನ್ನು ನಡೆಸುವುದು ಮುಂತಾದ ಕಾರ್ಯಗಳಲ್ಲಿ ಪುರುಷರಿಗೆ ಮಹಿಳೆ ಸಹಕಾರಿಯಾಗಿದ್ದಳು. ಜೊತೆಗೆ ಅಧ್ಯಾಪನ ಕಾರ್ಯದಲ್ಲಿ ತೊಡಗುತ್ತಿದ್ದಳು.

ವೇದಗಳ ಕಾಲದಲ್ಲಿ ಮಹಿಳಾ ವಿದ್ಯಾಭ್ಯಾಸಕ್ಕೆ ಉತ್ತಮ ಅವಕಾಶ ಮತ್ತು ಅನುಮತಿ ಹೇಗಿತ್ತೆಂದರೆ ಪುರುಷನಂತೆ ಮಹಿಳೆಯು ಸಹ ವಿದ್ಯಾಭ್ಯಾಸ ಮಾಡುತ್ತಿದ್ದರು. ಪುರುಷನ ಪ್ರವೇಶವಿರುವ ಎಲ್ಲಾ ಕ್ಷೇತ್ರಗಳಲ್ಲಿಯೂ ಮಹಿಳೆಯರಿಗೂ ಪ್ರವೇಶವಿರುವುದು ಮತ್ತು ಯಾವುದೇ ತಾರತಮ್ಯವಿಲ್ಲದೆ ಸವಲತ್ತುಗಳನ್ನು ಅನುಭವಿಸುವ ಅವಕಾಶವಿತ್ತು. ಆಧ್ಯಾತ್ಮಿಕ ಮತ್ತು ತಾತ್ವಿಕ ಚರ್ಚೆ ಹಾಗೂ ಪ್ರವಚನಗಳಲ್ಲಿ ಪಾಲ್ಗೊಳ್ಳುತ್ತಿದ್ದರು.

ಋಗ್ವೇದದ ಶ್ಲೋಕಗಳನ್ನು ರಚಿಸಿದ್ದವರಲ್ಲಿ ಇಪ್ಪತ್ತಕ್ಕೂ ಹೆಚ್ಚು ಸ್ತ್ರೀಯರಿದ್ದರು. ಉದಾ.: ಸುಲಭ, ಮೈತ್ರೇಯ ಮತ್ತು ಗಾರ್ಗಿ ಉಪನಯನ ಸಂಸ್ಕಾರಕ್ಕೆ ಹೆಣ್ಣು ಮಕ್ಕಳೂ ಸಹ ಒಳಪಡುತ್ತಿದ್ದರು. 8 ವರ್ಷದ ವಯಸ್ಸಿನಲ್ಲಿ

ಉಪನಯನವನ್ನು ಮಾಡಲಾಗುತ್ತಿತ್ತು. ವಿವಾಹಿತ ಮಗಳು ತನ್ನ ತಂದೆಯ ಶವ ಸಂಸ್ಕಾರ ಮಾಡುವ ಹಕ್ಕನ್ನು ಹೊಂದಿದ್ದಳು. ವಿವಾಹ ಅಪೇಕ್ಷಿತವಾಗಿದ್ದರೂ ಕಡ್ಡಾಯವಾಗಿರಲಿಲ್ಲ. ಬಾಲ್ಯವಿವಾಹ ರೂಢಿಯಲ್ಲಿರಲಿಲ್ಲ. ವಿಧವಾ. ಪುನರ್ ವಿವಾಹಕ್ಕೆ ಅವಕಾಶವಿತ್ತು. ಹೇಗೆಂದರೆ –

ಸ್ತ್ರೀ–ಪುರುಷ ಸಂಬಂಧಗಳ ನೆಲೆಯಲ್ಲಿ ಸಮಾನ ಹಕ್ಕುಗಳಿದ್ದವು. ಮದುವೆಗೆ ಮೊದಲೇ ಮಗಳು ಋತುಮತಿಯಾದರೆ ಅವಳ ಮಾತಾಪಿತರು ನರಕಕ್ಕೆ ಹೋಗುವರೆಂಬ ನಂಬಿಕೆಗಳಿರಲಿಲ್ಲ. ಮಹಿಳೆ ವಿವಾಹವನ್ನು ಆಗಲೇಬೇಕೆಂಬ ನಿಯಮವೂ ಇರಲಿಲ್ಲ. ಈ ವಿಚಾರದಲ್ಲಿ ಆಕೆ ಸಂಪೂರ್ಣ ಸ್ವಾತಂತ್ರ್ಯದ ಹಕ್ಕನ್ನು ಹೊಂದಿದ್ದಳು. ಮದುವೆಯಾದ ಗಂಡು ಒಂದು ವೇಳೆ ಬೇಟೆ, ಯುದ್ಧ, ಕಾಯಿಲೆಯಿಂದ ಸತ್ತರೆ, ಆಕೆ ಸತ್ತ ಗಂಡನ ಅಣ್ಣಂದಿರನ್ನಾಗಲಿ, ತಮ್ಮಂದಿರನ್ನಾಗಲಿ ಮರುವಿವಾಹವಾಗುವ ಹಕ್ಕನ್ನು ಪಡೆದಿದ್ದಳು.

ಆಸ್ತಿಯ ಉತ್ತರಾಧಿಕಾರದ ವಿಚಾರದಲ್ಲಿ ಮಹಿಳೆಯರ ಹಕ್ಕುಗಳು ಸೀಮಿತವಾಗಿದ್ದವು. ತಂದೆಯ ಆಸ್ತಿಯಲ್ಲಿ ಮಗಳಿಗೆ ಹಕ್ಕಿರಲಿಲ್ಲವಾದರೂ ಅವಿವಾಹಿತ ಮಗಳು, ಗಂಡು ಮಕ್ಕಳಿಗೆ ನೀಡಿದ ಆಸ್ತಿಯ ನಾಲ್ಕನೆಯ ಒಂದು ಭಾಗವನ್ನು ಪಡೆಯಲು ಅರ್ಹಳಾಗಿದ್ದಳು. ಅಂದರೆ ಋಗ್ವೇದ ಕಾಲದ ನಾರಿ ಶಕ್ತಿ ಮತ್ತು ಸ್ವಾತಂತ್ರ್ಯದ ಪ್ರತೀಕವಾಗಿದ್ದಾಳೆ. ತಂದೆಯ ಆಸ್ತಿಯಲ್ಲಿ ಗಂಡು ಮಕ್ಕಳಿಗೆ ಅಧಿಕಾರವಿರುವಂತೆಯೇ ಹೆಣ್ಣು ಮಗಳಿಗೂ ಸಮಾನ ಅಧಿಕಾರವಿದೆ. ಯುವತಿಯಾಗಿ ತನ್ನ ಗಂಡನನ್ನು ತಾನೇ ಆಯ್ಕೆ ಮಾಡಿಕೊಳ್ಳಬಲ್ಲವಳಾಗಿದ್ದಾಳೆ. ಹೀಗಾಗಿ ಈ ಕಾಲದಲ್ಲಿ ಮಹಿಳೆಯರಿಗೆ ಮಹತ್ವದ ಸ್ಥಾನವು ಲಭಿಸಿತು.

ಈ ಕಾಲದ ಸಮಾಜವು ಸಮಾನಾವಕಾಶವನ್ನು ಮಹಿಳೆಯರಿಗೆ ಒದಗಿಸದೇ ಹೋಗಿದ್ದರೆ, ಋಗ್ವೇದದ ಪುಟಗಳಲ್ಲಿ ಅಲಂಕಾರಪ್ರಿಯರಾಗಿದ್ದ ಅನೇಕ ಕೀರ್ತಿವಂತ ಮಹಿಳೆಯರನ್ನು ಕಾಣಲು ಸಾಧ್ಯವಾಗುತ್ತಿರಲಿಲ್ಲ. ಅಂದರೆ ಶೈಕ್ಷಣಿಕ ಹಾಗೂ ಧಾರ್ಮಿಕ ವಲಯದ ಹಕ್ಕುಗಳಿಂದ ಮಹಿಳೆಯರು ಋಗ್ವೇದದಲ್ಲಿರುವ ಪದ್ಯಗಳಲ್ಲಿ ಹಲವರು ತಮ್ಮ ಪಾಂಡಿತ್ಯದ ಸಮರ್ಥನೆಯನ್ನು ಕಂಡುಕೊಂಡರು. ಉದಾ.: ಋಗ್ವೇದ 5ನೇ ಅಧ್ಯಾಯದಲ್ಲಿರುವ ಸ್ತೋತ್ರಗೀತೆಗಳಲ್ಲಿ ಒಂದನ್ನು ಅತಿ ಪಾಂಡಿತ್ತಯವನ್ನು ಗಳಿಸಿದ 'ವಿಶ್ವಾವರ' ಎಂಬ ಹೆಸರನ್ನು ಪಡೆದಿದ್ದ ಮಹಿಳೆಯು ರಚಿಸಿದಳು ಎಂದು ಹೇಳಲಾಗಿದೆ. ಅವಳು ಬ್ರಹ್ಮವಾಹಿನಿಯೂ ಅಂದರೆ ದಾರ್ಶನಿಕಳೂ ಮತ್ತು ಮಂತ್ರ ದೃಷ್ಟಿಯೂ ಅಂದರೆ ಪವಿತ್ರ ಗ್ರಂಥಗಳ ಅಧ್ಯಯನದಲ್ಲಿ ಚೆನ್ನಾಗಿ ನುರಿತವಳೂ ಆಗಿದ್ದಳು. ಅವಳು ಒಂದು ಯಾಗದಲ್ಲಿ 'ಋತ್ವಿಕ್‌ಳಂತೆ' ಪಾತ್ರ ವಹಿಸಿ ಸಂಬಂಧಪಟ್ಟ ಕರ್ತವ್ಯಗಳನ್ನು ಬಹು ಸಮರ್ಪಕವಾಗಿ ವಿಧ್ಯುಕ್ತವಾದ ರೀತಿಯಲ್ಲಿ ನಿರ್ವಹಿಸಿದಳೂ ಎಂಬುದಾಗಿ ವಿವರಿಸಲಾಗಿದೆ.

ಇವರ ಪಾಂಡಿತ್ಯದಿಂದ ಇನ್ನೂ ಅನೇಕ ಮಹಿಳೆಯರು ಪ್ರೇರಣೆ ಹೊಂದಿ ತಮ್ಮ ಪಾಂಡಿತ್ಯವನ್ನು ಸಹ ಹೊರ ಹೊಮ್ಮಿಸಿರುವುದನ್ನು ಕಾಣಬಹುದು. ಅವರುಗಳೆಂದರೆ ರಾಜಕುವರಿ, ಘೋಷ, ಲೋಪಮುದ್ರ, ಸಿಕತಾ, ವಿರಾವರಿ, ಅಪಾಲ, ಉಪಾಲ, ಇಂದ್ರಾಣಿ, ಮಮತ, ಶಾಶ್ವತಿ, ಸುಲಭ ಮುಂತಾದ ಮಹಿಳೆಯರು ಸಹ ಗಾಢವಾದ ಪಾಂಡಿತ್ಯವನ್ನು ಗಳಿಸಿ ಸುಪ್ರಸಿದ್ಧರಾಗಿದ್ದರು. ಮಹಿಳೆಯರನ್ನು ಆಧ್ಯಾತ್ಮಿಕ ಬೋಧಕರು ಹಾಗೂ ಶಿಕ್ಷಕರು ಎಂಬುದಾಗಿ

ಒಪ್ಪಿಕೊಂಡು ಗೌರವಿಸಲಾಗುತ್ತಿತ್ತು. ಈ ರೀತಿ ಮಹಿಳೆಯರ ಬಗೆಗಿದ್ದ ಗೌರವ ಭಾವನೆ ಪ್ರಾಚೀನ ಭಾರತದ ಜನರ ಹೃದಯಗಳಲ್ಲಿ ಆಳವಾಗಿ ಬೇರೂರಿದ್ದರಿಂದ, ಬಹುಶಃ ಅವರ ಸ್ಫೂರ್ತಿಗೊಂದು ಜ್ಞಾನವನ್ನೇ ಸರಸ್ವತಿ ಎಂಬ ಸ್ತ್ರೀ ದೇವತೆಯ ಹೆಸರಿನ ಮೂಲಕ ಮೂರ್ತೀಕರಿಸಿದರು. ಅಂದರೆ ಸರಸ್ವತಿ ದೇವಿಯನ್ನು ವಿದ್ಯಾಧಿ ದೇವತೆ ಎಂಬುದಾಗಿ ವರ್ಣಿಸಿ ಆರಾಧಿಸಲು ತೊಡಗಿದರು ಎಂದರ್ಥವಾಗುತ್ತದೆ. ಹೀಗೆ ಶೈಕ್ಷಣಿಕ ಕ್ಷೇತ್ರಕ್ಕೆ ಸಂಬಂಧಪಟ್ಟಂತೆ ನೋಡಿದರೆ ನಿರ್ವಿವಾದವಾಗಿ ಮಹಿಳೆಯರ ಸ್ಥಾನಮಾನ ಹಾಗೂ ಸಮಾನ ಅವಕಾಶ ಹಕ್ಕುಗಳನ್ನು ಆಕೆ ಹೊಂದಿದಳು ಎನ್ನುವುದರಲ್ಲಿ ಯಾವುದೇ ರೀತಿಯ ಅಪನಂಬಿಕೆಗೆ ಎಡೆಯೇ ಇಲ್ಲ.

ಯಾಕೆಂದರೆ ಶಿಕ್ಷಣ ಕ್ಷೇತ್ರದಲ್ಲಿ ಮಹಿಳೆಗೆ ಮತ್ತೊಂದು ಮಹತ್ವದ ಮೆಟ್ಟಿಲು ಇತ್ತು. ಏನೆಂದರೆ 'ಯಜ್ಞೋಪವೀತಿನಿ' ಎಂಬ ಪದವು ಆ ಕಾಲದಲ್ಲಿ ಮಹಿಳೆಯರಿಗೂ ದೀಕ್ಷೆಯನ್ನು ಕೊಟ್ಟು ವೇದಾಧ್ಯಯನವನ್ನು ಕೈಗೊಳ್ಳಲು ಅವರಿಗೆ ಅನುಮತಿಯನ್ನು ನೀಡಲಾಗುತ್ತಿತ್ತು ಎಂಬುದನ್ನು ಸೂಚಿಸುತ್ತದೆ. ವೇದ ಸಾಹಿತ್ಯವು ಶಿಕ್ಷಣ ವಿಚಾರದಲ್ಲಿ ಪುರುಷರಂತೆ ಮಹಿಳೆಯರಿಗೂ ಸಮಾನವಾದ ಹಕ್ಕುಗಳಿದ್ದವು ಹಾಗೂ ಅನೇಕ ಮಹಿಳೆಯರು ಅಗಾಧವಾದ ಪರಿಜ್ಞಾನವನ್ನು ಹೊಂದಿದು, ತತ್ವಶಾಸ್ತ್ರಜ್ಞೆಯರಾಗಿದ್ದರು.

ವೇದಗಳ ಆರಂಭ ಕಾಲದಲ್ಲಿನ ಮಹಿಳೆಯ ಜೀವನ ಸ್ಥಿತಿ ಹಾಗೂ ಬದುಕುವ ಹಕ್ಕು ಬಾಧ್ಯತೆಗಳು ಉತ್ತಮವಾಗಿರುವುದು ಕಂಡು ಬರುತ್ತದೆ. ಅದರಲ್ಲೂ ಋಗ್ವೇದದ ಕಾಲದಲ್ಲಿ ಸ್ತ್ರೀಯನ್ನು ಶಕ್ತಿ ಹಾಗೂ ಔದಾರ್ಯದ ಪ್ರತೀಕವಾಗಿ ಕಾಣುತ್ತಿದ್ದರು. ಜನಗಳ ಮನಸ್ಸಿನಲ್ಲಿ ಸ್ತ್ರೀ ಬಗ್ಗೆ ಅತ್ಯುತ್ತಮವಾದ ಭಾವನೆಗಳಿರುವುದರ ಜೊತೆ ಸಮಾನ ಭಾವದಿಂದ ಕಾಣುವ ಪ್ರವೃತ್ತಿಯನ್ನು ಹೊಂದಿದ್ದರು.

ಮದುವೆಯ ಸಂದರ್ಭದಲ್ಲಿಯೂ ಸಹ ಪುರೋಹಿತ ವಧುವಿಗೆ ಹೀಗೆಂದು ಆಶೀರ್ವದಿಸುತ್ತಾನೆ. "ಮಾವನಿಗೆ ಸಾಮ್ರಾಜ್ಞಿಯಾಗಿರು; ಅತ್ತೆಗೆ ಸಾಮ್ರಾಜ್ಞಿಯಾಗಿರು; ನಾದಿನಿಯರಿಗೆ ಮತ್ತು ಮೈದುನರಿಗೆ ಸಾಮ್ರಾಜ್ಞಿಯಾಗಿರು; ಮನೆಯಲ್ಲಿರುವ ಪರಿವಾರದವರೊಂದಿಗೆ ಗೃಹ ಪತ್ನಿಯ ಅಂದರೆ ಮನೆಯೊಡತಿಯ ಅಧಿಕಾರದೊಡನೆ ಮಾತನಾಡು; ದ್ವಿಪಾದಿಗಳ ಮತ್ತು ಚತುಷ್ಪದಿಗಳ ಅಂದರೆ ಪಶುಪಕ್ಷಿಗಳ ವಿಷಯದಲ್ಲಿ ಕಲ್ಯಾಣಿಯಾಗಿರು ಎನ್ನುತ್ತಾನೆ. ಇಲ್ಲಿ ಹೆಣ್ಣು ಪುರುಷನ ಅಧಿಕಾರಕ್ಕೆ ಹತ್ತಿರವೇ ಇದ್ದಾಳೆ. ಇದರಿಂದಲೇ ಅವಳಿಗಿದ್ದ ಹಕ್ಕು, ಸ್ವಾತಂತ್ರ್ಯವನ್ನು ತಿಳಿಯಬಹುದು. ಜೊತೆಗೆ ಈ ಕಾಲದಲ್ಲಿ ಮಹಿಳೆಯರ ಶೋಚನೀಯ ಸ್ಥಿತಿಗೆ ಕಾರಣವಾಗಿರುವ 'ಸತಿಸಹಗಮನ' ಪದ್ಧತಿ ಆಚರಣೆಯಲ್ಲಿರಲಿಲ್ಲ. ಆಕೆ ಸತ್ತ ಗಂಡನ ತಮ್ಮನನ್ನು ವರಿಸುವ ಅವಕಾಶವಿತ್ತು. ಆದ್ದರಿಂದ ವಿಧವೆಯ ಬಾಳು ನರಕವಾಗಿರಲಿಲ್ಲ ಎಂಬುದು ಸ್ಪಷ್ಟವಾಗುತ್ತದೆ.

ಸ್ತ್ರೀ–ಪುರುಷರು ಪರಸ್ಪರ ವಿಶ್ವಾಸದಿಂದ ನಿರುಪದ್ರವಿಗಳಾಗಿ ನಿಷ್ಕಳಂಕರಾಗಿ, ಪರಸ್ಪರ ನಿಷ್ಠೆಯಿಂದ ಸರಿಸಮಾನರಾಗಿ ಬದುಕಬೇಕಾದ ಸಾಂಸಾರಿಕ ಮೌಲ್ಯಗಳನ್ನು ಹೊಂದಿದ್ದರು. ಸಾಂಪ್ರದಾಯಿಕ ನಿಷೇಧಗಳು ಮತ್ತು ಮನುಷ್ಯ ವಿರೋಧಿ ಆಚರಣೆಗಳು ಸ್ತ್ರೀ–ಪುರುಷರ ವ್ಯಕ್ತಿ ಸ್ವಾತಂತ್ರ್ಯಕ್ಕೆ ಧಕ್ಕೆಯಾಗದಂತೆ ಕಾರ್ಯನಿರ್ವಹಿಸುತ್ತಿದ್ದುದರಿಂದಲೇ ಈ ಯುಗವನ್ನು ಸ್ತ್ರೀಯರ ಪಾಲಿಗೆ 'ಸುವರ್ಣಯುಗ'ವೆಂದೇ ಕರೆಯಲಾಗುತ್ತಿತ್ತು. ಇದಕ್ಕೆ ಪುಷ್ಟಿಕೊಡುವ ಅಂಶವೆಂದರೆ

ಒಂದು ಕುಟುಂಬದಲ್ಲಿ ತಂದೆಗೆ ಪುತ್ರ ಸಂತಾನವಿಲ್ಲದಿದ್ದಾಗ ಅವನ ಪುತ್ರಿಯೇ ವಿಶೇಷ ಸಂದರ್ಭಗಳಲ್ಲಿ ಶವ ಸಂಸ್ಕಾರಗಳನ್ನು ಮಾಡಬಹುದಾಗಿತ್ತು. ಸಂತಾನವೇ ಇಲ್ಲದ ವ್ಯಕ್ತಿಯ ವಿಷಯದಲ್ಲಿಯೂ ಒಬ್ಬ ಪುತ್ರಿಕಾ ಅಂದರೆ ನಿಯೋಜಿತ ಮಗಳು ಮತ್ತು ಸ್ವಂತ ಮಗನಿಗೆ ಸರಿಸಮಾನ ಎಂಬುದಾಗಿ ಎಣಿಸಲಾಗಿದ್ದು ಪುತ್ರಿಕಾ ಪುತ್ರ ಅಂದರೆ ನಿಯೋಜಿತ ಮಗಳ ಮಗ ಎಲ್ಲಾ ಸಂಸ್ಕಾರಗಳನ್ನು ಮಾಡಲು ಅರ್ಹರು ಎಂಬುದಾಗಿ ಭಾವಿಸಲಾಗಿತ್ತು.

ಆದರೆ ಉತ್ತರ ವೇದಗಳ ಕಾಲದಲ್ಲಿ ಮಹಿಳೆಯರಿಗೆ ಎಲ್ಲಾ ರೀತಿಯ ಸಮಾನತೆ, ಸ್ವಾತಂತ್ರ್ಯದ ಹಕ್ಕುಗಳನ್ನು ಮುಂದಿನ ಸಮಾಜದಲ್ಲಿ ಕಸಿಯುತ್ತಾ ಬಂದಿತೆಂಬುದರಲ್ಲಿ ಸಂಶಯವಿಲ್ಲ. ಈ ಕಾಲದಲ್ಲಿ ವಿವಾಹ ಎಂದರೆ ಆತ್ಮಗಳ ಸಮ್ಮಿಲನ ಎಂಬ ಭಾವನೆ ಹೋಗಿ, ಸ್ತ್ರೀಯು ಪುರುಷನಲ್ಲಿ ಐಕ್ಯವಾಗುವುದು ಎಂಬರ್ಥವುಳ್ಳ ಕಲ್ಪನೆ ಪ್ರಧಾನವಾಗಿತ್ತು. ಹೆಂಡತಿಯೇ ಗಂಡನಲ್ಲಿ ಐಕ್ಯಳಾದ ಮೇಲೆ ಹೆಣ್ಣಿಗೆ ಅಸ್ತಿತ್ವದ ಹಕ್ಕಿಲ್ಲವೆಂದ ಮೇಲೆ ಆಕೆಗೆ ಸ್ವಂತ ಆಸ್ತಿಯ ಹಕ್ಕು ಎಲ್ಲಿಂದ ಬರಬೇಕು? ಪತ್ನಿಯು ತನ್ನ ಪತಿಯು ದುಷ್ಟನಾಗಿದ್ದರೂ ಆತನನ್ನು ಭಕ್ತಿಯಿಂದ ಆರಾಧಿಸಬೇಕಾಗಿತ್ತು. ಪತ್ನಿಯಿಂದ ದಾಂಪತ್ಯದ ಹಕ್ಕುಗಳನ್ನು ಕಸಿದುಕೊಳ್ಳಲಾಗುತ್ತಿತ್ತು ಎಂಬುದನ್ನು ಸೂಚಿಸುತ್ತದೆ. ಮಹಿಳೆಗೆ ಆಸ್ತಿಯನ್ನು ಹೊಂದುವ ಸ್ವಾತಂತ್ರ್ಯ ಹಾಗೂ ಶಿಕ್ಷಣದ ಪ್ರಯೋಜನಗಳನ್ನು ಅನುಭವಿಸುವ ಹಕ್ಕಿರಲಿಲ್ಲ. ಅವಳು ಯಾವಾಗಲೂ ಪುರುಷನ ಕಣ್ಗಾವಲಿನಲ್ಲಿ ಇರಬೇಕಾಗಿತ್ತು.

ಸ್ಮೃತಿಕಾರರು ಹಾಗೂ ಮಹಿಳೆಯರ ಪಾತ್ರದ ಮೇಲೆ ಹಲವಾರು ನಿಬಂಧನೆಗಳನ್ನು ಹೇರಿದರು ಎನ್ನಬಹುದು. ಸ್ಮೃತಿಕಾರ ಮನುಮಹರ್ಷಿ ಹೇಳುವಂತೆ ಸ್ತ್ರೀಯಾದವಳು. ಬಾಲ್ಯದಲ್ಲಿ ತಂದೆಯ ಪೋಷಣೆಯಲ್ಲಿ, ಯೌವ್ವನದಲ್ಲಿ ಪತಿಯ ಪೋಷಣೆಯಲ್ಲಿ, ಮುಪ್ಪಿನಲ್ಲಿ ತನ್ನ ಮಕ್ಕಳ ಪೋಷಣೆಯಲ್ಲಿ ಇರತಕ್ಕದ್ದೆಂದು ವಿಧಿಸಲಾಯಿತು. ಮಹಿಳೆಯರ ಬಗ್ಗೆ ಮನುವಿಗೆ ಗೌರವಿದ್ದಿರಬಹುದಾದರೂ, ಸ್ತ್ರೀಯರು ಸ್ವಾತಂತ್ರ್ಯಕ್ಕೆ ಅರ್ಹರಲ್ಲ ಎಂದೂ ಕೂಡ ಅವರೇ ತಿಳಿಸಿದ್ದಾರೆ. ಈ ದಿಸೆಯಲ್ಲಿ ಮಹಿಳೆಯರನ್ನು ಕೇವಲ ಪುರುಷನ ಒಂದು ಅಮೂಲ್ಯ ಅನುಬಂಧ ಎಂಬುದಾಗಿ ಎಣಿಸಲಾಗಿತ್ತು.

ವಿವಾಹಿತ ಮಹಿಳೆಗೆ ಧಾರ್ಮಿಕ ಸಂಸ್ಕಾರಗಳನ್ನು ಆಚರಿಸುವುದಾಗಲಿ ಅಥವಾ ಸಂಪತ್ತನ್ನು ಪಿತ್ರಾರ್ಜಿತವಾಗಿ ಪಡೆಯುವುದಕ್ಕಾಗಲಿ ಹಕ್ಕಿರಲಿಲ್ಲ. ಅವಳಿಗೆ ತನ್ನ ಗಂಡನ ಆಸ್ತಿಗೆ ಮೇಲೂ ಸಹ ಯಾವುದೇ ರೀತಿಯ ಅಧಿಕಾರವಿರಲಿಲ್ಲ. ಈ ಕಾಲದ ಸಮಾಜವು ಸ್ವತಂತ್ರವಾಗಿ ಆಸ್ತಿಯನ್ನು ಹೊಂದುವ ವಿಷಯದಲ್ಲಿ ಅವಳಿಗಿದ್ದ ಹಕ್ಕಿನ ಸಮಂಜಸತೆಯ ಬಗ್ಗೆ ಸಂದೇಹ ಹಾಗೂ ತೀವ್ರ ಆಕ್ಷೇಪಣೆಗಳನ್ನು ವ್ಯಕ್ತಪಡಿಸಿತು. ಅವಳು ತನ್ನ ತಂದೆ ತಾಯಿಗಳ ಮನೆಯಿಂದ ತಂದ ಆಭರಣ, ಪಾತ್ರೆ ಮುಂತಾದ ಚರಾಸ್ತಿಗಳನ್ನು ಮಾತ್ರ ಹೊಂದಿರಬಹುದಾಗಿತ್ತು.

ನಂತರ ಮಹಾಕಾವ್ಯಗಳಲ್ಲೂ ಮಹಿಳೆಯರಿಗೆ ಪೂಜನೀಯ ಸ್ಥಾನವನ್ನು ನೀಡಿದ್ದರೂ ಸಹ ಆಕೆ ಆದರ್ಶ ಸ್ತ್ರೀತ್ವದ ಒಂದು ಅತ್ಯಂತ ಭವ್ಯವಾದ ನಿದರ್ಶನವಾಗಿರುವುದನ್ನು ಕಾಣಬಹುದು. ಪತಿಗೆ ನಿಷ್ಠೆ ಹೊಂದಿರುವ ಪತ್ನಿಯ ದೃಷ್ಟಾಂತಗಳನ್ನು ತುಂಬುವ ಕೆಲಸ ಮಹಾಕಾವ್ಯಗಳಲ್ಲಿವೆ. ಇದಕ್ಕೆ ಅತ್ಯುತ್ತಮ ನಿದರ್ಶನವೆಂದರೆ ರಾಮಾಯಣದ ಸೀತೆ. ಇಲ್ಲೆಲ್ಲಾ ಸ್ತ್ರೀಗೆ ಸ್ವಂತ ವ್ಯಕ್ತಿತ್ವವೇ ಇಲ್ಲವೆಂಬಂತೆ ಪ್ರತಿಬಿಂಬಿಸಲಾಯಿತು.

ಒಟ್ಟಾರೆ ವೇದಗಳ ಆರಂಭದಲ್ಲಿ ಮಹಿಳೆಯರಿಗಿದ್ದ ಎಲ್ಲಾ ರೀತಿಯ ಆದ್ಯತೆಗಳು, ಹಕ್ಕುಗಳು, ಸ್ವಾತಂತ್ರ್ಯ ಸಮಾನತೆಗಳು ಕ್ರಮೇಣ ಅವನತಿಯನ್ನು ಹೊಂದಿತ್ತು. ಆದರೆ ಮುಂದೆ ಜೈನ ಹಾಗೂ ಬೌದ್ಧ ಧರ್ಮಗಳ ಕಾಲದಲ್ಲಿ ಮಹಿಳೆಯರ ಸಮಾನತೆ ಹಾಗೂ ಕೆಲವು ಸೌಕರ್ಯಗಳು ಉತ್ತಮಗೊಂಡವೆಂಬುದು ಸಮಾಧಾನಕರ ವಿಚಾರ.

## ಜೈನ ಧರ್ಮದ ಕಾಲದಲ್ಲಿ ಮಹಿಳಾ ಹಕ್ಕುಗಳು

ಅನೇಕ ಜೈನ ಗುರುಗಳು ಮತ್ತು ಬರಹಗಾರರು ಧಾರ್ಮಿಕ ಹಾಗೂ ಕಾನೂನಿನ ಕ್ಷೇತ್ರಗಳಲ್ಲಿ ಮಹಿಳೆಯರ ಸ್ಥಾನಮಾನವನ್ನು ಉತ್ತಮಪಡಿಸುವುದಕ್ಕಾಗಿ ಮೂಲಕರ್ತರಂತೆ, ಮಾರ್ಗದರ್ಶಕರಂತೆ ಸ್ತುತ್ಯಾರ್ಹ ಸೇವೆಯನ್ನು ಸಲ್ಲಿಸಿದ್ದಾರೆ. ಜೈನ ಧರ್ಮದಲ್ಲಿ ಸ್ತ್ರೀಯರಿಗೆ ವಿದ್ಯೆ ಕಲಿಯಲು ಜೈನ ಸನ್ಯಾಸಿ ಜೀವನವನ್ನು ಕೈಗೊಳ್ಳಲು ಮಹಿಳೆಯರಿಗೆ ಸ್ವಾತಂತ್ರ್ಯವನ್ನು ನೀಡಿದ್ದರು. ಜೈನ ಧರ್ಮಕ್ಕೆ ಸೇರುವ ಮಹಿಳೆಯರಿಗೆ ಯಾವುದೇ ನಿರ್ಬಂಧವಿಲ್ಲದೆ ತಮ್ಮ ಗಂಡಂದಿರನ್ನು ತ್ಯಜಿಸಿ ಜೈನ ಬಸದಿಗಳಿಗೆ ಸೇರಿಕೊಳ್ಳುವ ಹಕ್ಕುಬಾಧ್ಯತೆ ಮಹಿಳೆಯರಿಗಿತ್ತು.

ಕೌಶಾಂಬಿಯ ರಾಜಕುಮಾರಿ ಜಯಂತಿಯು ಸ್ವತಃ ಮಹಾವೀರನ ಜೊತೆ ಜೈನಧರ್ಮದ ಮೂಲತತ್ವಗಳ ಬಗ್ಗೆ ಚರ್ಚಿಸಿ ತನ್ನ ಸಂಶಯಗಳನ್ನು ಪರಿಹರಿಸಿಕೊಂಡು ತನ್ನೆಲ್ಲಾ ರಾಣಿ ವೈಭವವನ್ನು ತೊರೆದು ಜೈನಳಾಗಿ ತನ್ನ ವಿಲಾಸ ಜೀವನವನ್ನು ತ್ಯಜಿಸಿ ಕಠಿಣ ವ್ರತಗಳನ್ನು ಕೈಗೊಂಡಳೆಂಬ ಕಥೆ ಬರುವುದರಿಂದ ಸ್ತ್ರೀಯರು ಪುರುಷರೊಂದಿಗೆ ವಾಗ್ವಾದ ನಡೆಸುವ ಅವಕಾಶವಿರುವುದು, ಮೋಕ್ಷ ಸಾಧನೆಗಾಗಿ ಸ್ತ್ರೀಯರು ಕಠಿಣ ತಪಸ್ಸನ್ನಾಚರಿಸುವುದು ಕಂಡು ಬರುವುದರಿಂದ ಸ್ತ್ರೀಯರಿಗೆ ಧಾರ್ಮಿಕ ಸ್ವಾತಂತ್ರ್ಯವಿರುವುದು ಸ್ಪಷ್ಟವಿದೆ. ಇವೂ ಅಲ್ಲದೆ, ಜೈನ ಸಾಹಿತ್ಯದಲ್ಲಿ, ಧಾರ್ಮಿಕ ರಂಗದಲ್ಲಿ ಪ್ರಶಂಸಾರ್ಹ ರೀತಿಯಲ್ಲಿ ಸಾಧನೆ ಗಳಿಸಿ ಮೇಲಕ್ಕೇರಿದ ಅನೇಕ ಶ್ರೇಷ್ಠ ಮಹಿಳೆಯರ ಬಗ್ಗೆ ಉಲ್ಲೇಖಗಳಿವೆ.

ಉದಾಹರಣೆಗೆ ಒಂದು ಜಾತಕ ಕಥೆಯು ನಿರ್ನಾಮಿಕ ಎಂಬ ಹೆಸರನ್ನು ಪಡೆದಿದ್ದ, ಅತ್ಯಂತ ಕೀಳು ಜಾತಿಗೆ ಸೇರಿದ ಹಾಗೂ ಬಹು ಕುರೂಪಿಯಾಗಿದ್ದ ಕನ್ಯೆಯೊಬ್ಬಳು ಹೇಗೆ ಸನ್ಯಾಸಿನಿಯಾದಳು ಎಂಬುದನ್ನು ವಿವರಿಸುತ್ತದೆ. ಜೈನ ಪುರಾಣ ಕಥೆಯ ಅರಮನೆ ಹಾಗೂ ಮಹಾಭವನಗಳಲ್ಲಿ ಬಾಳುತ್ತಿದ್ದ ಅನೇಕ ರಾಜಕುಮಾರಿಯರು ಹಾಗೂ ಧನಿಕ ಮಹಿಳೆಯರು ಹೇಗೆ ವಿಲಾಸ ಭೋಗ ಭಾಗ್ಯಗಳನ್ನೆಲ್ಲ ತ್ಯಜಿಸಿ ಮಠಕ್ಕೆ ಸೇರಿ ಅತಿ ಕಠಿಣವಾಗಿದ್ದ ವಿರಕ್ತ ಜೀವನವನ್ನು ಸಂತೋಷದಿಂದ ಕೈಗೊಂಡರು ಎಂಬುದನ್ನು ವರ್ಣಿಸುತ್ತದೆ. ಮಹಾವೀರನ ಮಗಳಾಗಿದ್ದ 'ಪ್ರಿಯದಂಸನ' ಎಂಬ ಮಹಿಳೆಯೂ ಸಹ ಸನ್ಯಾಸಿನಿಯಾದಳು. ಕೋಸ ಮುಂತಾದ ರಾಜಾಸ್ಥಾನ ನರ್ತಕಿಯರು ಹಾಗೂ ವೇಶ್ಯಾಂಗನೆಯರೂ ಸಹ ತಾವು ನಡೆಸುತ್ತಿದ್ದ ವಿಲಾಸ ಜೀವನ ಒಂದು ನಾಶಕಾರಕ ಸೆಳೆತ ಹಾಗೂ ಆತ್ಮಘಾತಕ ಆಕರ್ಷಣೆ ಎಂಬುದನ್ನು ಮನದಟ್ಟು ಮಾಡಿಕೊಂಡು ಸನ್ಯಾಸಿನಿಯರಾದರು. ಮಹಾವೀರನ ಕಾಲದಲ್ಲಿ ವಿರಕ್ತ ಜೀವನವನ್ನು ಅನುಸರಿಸಿದ್ದ ಸಾಧ್ವಿ ಮತ್ತು ಶ್ರಮಿಕ ಅಂದರೆ ಶ್ರದ್ಧಾವಂತ ಹಾಗೂ ಭಕ್ತಿಭಾವಗಳ ಸಾಮಾನ್ಯ ಮಹಿಳೆಯರ ಸಂಖ್ಯೆ ಅತ್ಯಧಿಕವಾಯಿತು.

ಧಾರ್ಮಿಕ ರಂಗದಲ್ಲಿ ಅನೇಕ ಪವಾಡಗಳನ್ನು ಮಾಡಿ ತೋರಿದ್ದ 'ಚಂದನ' ಎಂಬ ಹೆಸರನ್ನು ಪಡೆದಿದ್ದ ಹಾಗೂ ಸನ್ಯಾಸಿನಿ ಮಠದ ಮುಖ್ಯಸ್ಥಳಾಗಿದ್ದ ಮಹಿಳೆಯ ಬಗ್ಗೆ ಉಲ್ಲೇಖಗಳನ್ನು ನೋಡಬಹುದು. ಸುಮನ ಎಂಬ

ಶ್ರೇಷ್ಠ ಮಹಿಳೆಯ ನೇತೃತ್ವದಲ್ಲಿ ಅನೇಕ ಸಾಮಾನ್ಯ ಮಹಿಳೆಯರು ಅದೇ ರೀತಿಯ ಉತ್ತಮ ಸ್ಥಾನಮಾನವನ್ನು ಗಳಿಸಿದರು. ಸ್ತ್ರೀ ಶಿಕ್ಷಣಕ್ಕೆ ಹೆಚ್ಚಿನ ಆದ್ಯತೆಯಿದ್ದು ಗಣಿನಿ, ಸಾಧ್ವಿ, ಪ್ರವರ್ತಿನಿ ಮುಂತಾದ ವಿದುಷಿಯರಿರುವುದು ಸ್ಪಷ್ಟವಿದೆ. ಗಣಿನಿ ಎಂಬಾಕೆ ಜೈನ ಸಂಘದ ಮುಖ್ಯಸ್ಥೆಯಾಗಿದ್ದು, ಶ್ರಾವಕರಿಗೆ ಬೋಧನೆ ಮಾಡುತ್ತಿದ್ದು ಸಾಧ್ವಿಯೆಂದು ಪ್ರಸಿದ್ಧಳಾಗಿದ್ದಳು ಎಂಬುದು ತಿಳಿದು ಬರುತ್ತದೆ. ಜೈನ ಧರ್ಮ ಪ್ರಚಾರಕ್ಕೆ ಪ್ರವಾಸ ಮಾಡುವ ಮಹಿಳೆಯರನ್ನು ಪ್ರವರ್ತಿಯರೆಂದು ಕರೆಯುತ್ತಿದ್ದರಿಂದ ಮಹಿಳೆಯರಿಗೂ ಧಾರ್ಮಿಕ ಸ್ವಾತಂತ್ರ್ಯ ಮತ್ತು ಶೈಕ್ಷಣಿಕ ಸ್ವಾತಂತ್ರ್ಯವಿರುವುದು ಜೈನ ಧರ್ಮದಲ್ಲಿ ಕಂಡು ಬರುತ್ತದೆ. ಮಹಿಳೆಯರು ತಮ್ಮ ಸ್ವಂತ ಪ್ರತಿಭೆ ಹಾಗೂ ಸ್ವತಂತ್ರ ಪರಿಶ್ರಮಿಗಳ ಮೂಲಕ ಆಧ್ಯಾತ್ಮಕ ತುತ್ತ ತುದಿಯನ್ನು ಮುಟ್ಟಲು ಇದ್ದ ಸದಾವಕಾಶಗಳನ್ನು ಜೈನ ಧರ್ಮವು ಅವರಿಗೆ ನಿರಾಕರಿಸಲಿಲ್ಲ. ಈ ಬಗೆಯ ಧಾರ್ಮಿಕ ಸ್ವಾತಂತ್ರ್ಯವು ಮಹಿಳೆಯರ ಸಾಮಾನ್ಯ ಸ್ಥಾನಮಾನಗಳ ಮೇಲೆ ಹಿತಕರವಾಗಿದ್ದ ಪ್ರಭಾವವನ್ನು ಬೀರಿತು.

ಜೈನ ಸಾಹಿತ್ಯದಲ್ಲಿ ಸ್ತ್ರೀಯರನ್ನು ಉನ್ನತವಾಗಿ ಚಿತ್ರಿಸುವುದುಲು ಕಂಡು ಬರುವುದಿಲ್ಲ. ಜೈನ ಮುನಿಗಳಿಂಗ ರಚಿತವಾದ ಸಾಹಿತ್ಯದಲ್ಲಿಯೂ ಸ್ತ್ರೀಯರನ್ನು ನಾರಿ, ಅಂಗನಾ, ವನಿತಾ, ರಮಾ ಎಂಬುದಾಗಿ ಕರೆಯುತ್ತಾ ಪುರುಷಗಿಂತಲೂ ಹೀನಾಯವಾಗಿಯೇ ಚಿತ್ರಿಸಿದ್ದಾರೆ. ಅಲ್ಲದೆ ಪುರುಷನಿಗೆ ನಾರಿಗಿಂತ ದೊಡ್ಡ ವೈರಿ ಇಲ್ಲವೆಂದೇ ಹೇಳಲಾಗಿದೆ. ಸ್ತ್ರೀ ಪುರುಷರ ಸಮಾನತೆಯ ಬಗ್ಗೆ ಮಾಡನಾಡುತ್ತಿರುವ ಈ ಹೊತ್ತಿನಲ್ಲಿ ಯಾವಾಗಲೂ ಪುರುಷನ ದೇಹಕ್ಕೆ ಆಸೆ ಪಡುವವಳು ಹೆಣ್ಣು, ವಿಲಾಸಿ ಜೀವನದಲ್ಲಿ ಲೋಲಪುಳು ಪುರುಷನ ಅಧಃ ಪತನಕ್ಕೆ ಕಾರಣಳು ಎಂದು ಜೈನ ಧರ್ಮದ ಬಗ್ಗೆ ಅನಾದರ ಉಂಟಾಗುತ್ತದೆ. ವೈಧಿಕ ಧರ್ಮದ ಅನೇಕ ತತ್ವಗಳನ್ನು ಅಳವಡಿಸಿಕೊಂಡಿರುವ ಜೈನ ಧರ್ಮ ಆಳದಲ್ಲಿ ಸ್ತ್ರೀ ವಿರೋಧಿ ನಿಲುವನ್ನೇ ಹೊಂದಿರುವುದು.

ಸಾಮಾಜಿಕ ಬದುಕಿನಲ್ಲಿ ಅದರಲ್ಲೂ ಕುಟುಂಬ ವ್ಯವಹಾರಗಳಲ್ಲಿ ತಕ್ಕಮಟ್ಟಿಗೆ ಕೆಲವು ಅಧಿಕಾರಗಳನ್ನು ಹೊಂದಿದ್ದಳು. ಕುಟುಂಬದಲ್ಲಿ ಅವರವರ ಪತಿಯರಂತೆ ಮಹಿಳೆಯರೂ ಸಮಾನ ಪಾತ್ರಧಾರಿಗಳಾಗಿ ಸಮಾನ ಕಾರ್ಯವನ್ನು ನಿರ್ವಹಿಸುತ್ತಿದ್ದರು. ಮಕ್ಕಳಿಲ್ಲದಿದ್ದಲ್ಲಿ ದತ್ತು ತೆಗೆದುಕೊಳ್ಳುವ ಅಧಿಕಾರ ಹಾಗೂ ಹಕ್ಕುಗಳು ಅವರ ಪತಿಯರ ಅಧಿಕಾರ ಮತ್ತು ಹಕ್ಕು ಬಾಧ್ಯತೆಗಳಿಗೆ ಸರಿಸಮಾನವಾಗಿದ್ದವು. ಈ ವಿಷಯದಲ್ಲಿ ಪತಿ ಪತ್ನಿಯರು ಅಧಿಕಾರ ಸರ್ವವ್ಯಾಪಕವಾಗಿತ್ತು. ಪಿತ್ರಾರ್ಜಿತ ಆಸ್ತಿಯನ್ನು ಪಡೆಯುವ ವಿಚಾರದಲ್ಲೂ ಸಹ ಅವರಿಗೆ ಅನೇಕ ಶಾಸನ ಸಮ್ಮತವಾಗಿದ್ದ ಹಕ್ಕುಗಳನ್ನು ಕೊಡಲಾಗಿತ್ತು. ಪಿತ್ರಾರ್ಜಿತ ಆಸ್ತಿಯನ್ನು ಸ್ತ್ರೀಯರಿಗೂ ಹಂಚುವ ಅವಕಾಶ ಅಂದರೆ ವಿಧವೆಯಾದರೆ ಗಂಡನ ಆಸ್ತಿಯ ಒಡೆತನದ ಹಕ್ಕು ಸ್ತ್ರೀಯರಿಗಿದ್ದವು. ವಿಧವೆಯ ವಿಚಾರದಲ್ಲಿ ಜೈನ ಶಾಸನ ಬಹು ಉದಾರವಾಗಿತ್ತು. ಅದು ಗಂಡನ ಸಮಸ್ತ ಆಸ್ತಿಪಾಸ್ತಿಗಳ ಸ್ವಾಮ್ಯ ವಿಧವೆಗೆ ಸಲ್ಲಬೇಕೆಂದು ವಿಧಿಸಿತು ಮತ್ತು ಇಷ್ಟ ಬಂದಂತೆ ವ್ಯವಸ್ಥೆ ಮಾಡಲು ಹಾಗೂ ವಿಲೇವಾರಿ ಮಾಡಲು ಪೂರ್ಣ ಹಕ್ಕನ್ನು ಕೊಡಲಾಗಿತ್ತು.

ಜೈನ ಕಾನೂನು ಅವಳಿಗೆ ಪುತ್ರನಿಗಿಂತ ಹೆಚ್ಚು ರಿಯಾಯಿತಿ ತೋರಿ ಆಸ್ತಿಯ ವಿಷಯದಲ್ಲಿ ಮಗನಿಗಿಂತ ಹೆಚ್ಚು ಅಂತಸ್ತನ್ನು ನೀಡಿತು. ಆದ್ದರಿಂದ ಜೈನ ಧರ್ಮವು ವಿಧವೆಯನ್ನು ಬೆಂಕಿಗೆ ಗಂಡನ ಶವದೊಂದಿಗೆ ಹಾರುವಂತೆ ಹೇಳುವುದಿಲ್ಲ. ಯಾಕೆಂದರೆ ಜೈನ ಧರ್ಮದ ಮೂಲ ಮಂತ್ರವೇ ಅಹಿಂಸೆ. ಮನುಷ್ಯ ಮಾತ್ರವಲ್ಲ ಪ್ರಾಣಿಗಳಿಗೆ ಹಿಂಸೆ ಮಾಡಬಾರದು ಎಂಬ ಸದಾಚಾರವನ್ನು ಹೇಳಿದ ಧರ್ಮ.

ಅಹಿಂಸೆಯಿಂದಲೇ ಶಾಂತಿ, ಸುಖ, ಸೌಭಾಗ್ಯಗಳು ದೊರೆಯುತ್ತವೆಯೆಂದು ಜೈನ ಧರ್ಮ ಸಾರುವುದರಿಂದ ಹೆಣ್ಣನ್ನು ಹಿಂಸಿಸುವುದು, ಹೀಯಾಳಿಸುವುದು, ಶಿಕ್ಷಿಸಿರುವುದು, ಅಮಾನವೀಯವಾಗಿ ನಡೆಸಿಕೊಂಡಿರುವುದು ಜೈನ ಧರ್ಮದಲ್ಲಿ ಇಲ್ಲ.

ಜೈನ ಸನ್ಯಾಸಿಗಳಾಗುವ ಸ್ವಾತಂತ್ರ್ಯವನ್ನು ಹೊಂದಿದ್ದರೂ ಪುರುಷರೇ ತೀರ್ಥಂಕರರಾಗಬೇಕೆಂಬ ನಿಯಮವಿದೆ. ಏಕೆಂದರೆ ಶುದ್ಧಾತ್ಮತೆ, ಬಂಧ ಮುಕ್ತತೆ, ರಾಗದ್ವೇಷ ರಹಿತರಾದವರೇ ಮುಕ್ತಾತ್ಮರು. ಇವರು ಪುರುಷರೇ ಎನ್ನುವ ನಿಲುವು ಜೈನ ಧರ್ಮದಲ್ಲಿದೆ. ಜೈನ ಧರ್ಮದಲ್ಲಿ ಪುರುಷನಿಗೆ ಶ್ರೇಷ್ಠತೆಯನ್ನು ಪ್ರತಿಪಾದಿಸುವುದರಿಂದ ಸ್ತ್ರೀಯರು ಹೀನ ಸ್ಥಿತಿಗೆ, ಅಪಮಾನಕ್ಕೆ ಒಳಗಾಗಿದ್ದಾರೆ. ನಿತ್ಯ ಬದುಕಿನಲ್ಲಿ ಭೋಗಕ್ಕಿರುವವಳು, ಚಿತ್ತವನ್ನು ಚಂಚಲಗೊಳಿಸುವವಳು, ವೈರಾಗ್ಯಕ್ಕೆ ಅಡ್ಡಿಯಾಗುವಳು ಎಂದು ಹೇಳಿ, ಆಕೆ ಮಾನಸಿಕವಾಗಿ, ಸಾಮಾಜಿಕವಾಗಿ ಹಿಂಸೆಯನ್ನು ಅನುಭವಿಸುತ್ತಾಳೆ. ಇಲ್ಲಿಯೂ ಸಹ ಹೆಣ್ಣನ್ನು ಎರಡನೆಯ ದರ್ಜೆಯ ಪ್ರಜೆಯಾಗಿ ಕಂಡಿದೆ.

ಆದರೆ ಕೆಲವು ಧಾರ್ಮಿಕ ಹಾಗೂ ಕಾನೂನು ಕ್ಷೇತ್ರಗಳಲ್ಲಿ ಮಹಿಳೆಯರಿಗೆ ಸಲ್ಲುವ ಹಕ್ಕುಗಳು ಮಾತ್ರ ದಕ್ಕಿವೆ ಎನ್ನುವುದರಲ್ಲಿ ಯಾವ ಅನುಮಾನವಿಲ್ಲ.

## ಬೌದ್ಧ ಧರ್ಮದಲ್ಲಿ ಮಹಿಳಾ ಹಕ್ಕುಗಳಿಗಿದ್ದ ಆದ್ಯತೆ

ಬೌದ್ಧ ಧರ್ಮ ಕಾಲದಲ್ಲಿ ಮಹಿಳೆಯ ಸ್ಥಾನಮಾನದಲ್ಲಿ ಮಹತ್ತರ ಸುಧಾರಣೆ ಕಂಡುಬಂದಿತು. ಬೌದ್ಧರು ಅಂಗೀಕೃತ ಸಾಮಾನ್ಯ ವಿಧಿ ನಿಯಮಗಳ ಪವಿತ್ರ ಗ್ರಂಥಗಳ ಮೇಲೆ ಕಣ್ಣಾಡಿಸಿದರೆ ಸಾಕು ಭಗವಾನ್ ಬುದ್ಧರ ಮನೋಭಾವ ಔದಾರ್ಯ ಪೂರ್ಣವಾಗಿತ್ತು ಎಂಬುದು ತಿಳಿದು ಬರುತ್ತದೆ. ಅವರು ಮಹಿಳೆಯರನ್ನು ಕೀಳೂ ಮಟ್ಟದವರೆಂದು ಎಣಿಸಲಿಲ್ಲ. ಅವರು ಸ್ತ್ರೀ ಪುರುಷರನ್ನು ಸಮಾನವಾಗಿ ಎಣಿಸುತ್ತಿದ್ದರು ಮತ್ತು ಅದರಲ್ಲಿ ಲಿಂಗಭೇದ ಮಾಡದೆ ಅವರಿಗೆ ಧರ್ಮವನ್ನು ಸಮಾನವಾಗಿ ಬೋಧಿಸುತ್ತಿದ್ದರು. ಸ್ತ್ರೀ–ಪುರುಷರಿಗೆ ಒಂದೇ ವಿಧವಾಗಿದ್ದ ಧರ್ಮೋಪದೇಶಗಳನ್ನು ನೀಡುವುದರ ಮೂಲಕ ಬುದ್ಧ ಇಬ್ಬರೂ ಸಮಾನರು ಎಂಬುದನ್ನು ನಿಶ್ಚಯವಾಗಿ ಒಪ್ಪಿಕೊಂಡಿದ್ದರು ಎನ್ನಬಹುದು. ಅವರು ಹಸಿದ ಆತ್ಮಕ್ಕೆ ಆಧ್ಯಾತ್ಮಿಕ ಆಹಾರವನ್ನು ಪಡೆಯುವ ಹಕ್ಕಿದೆ, ಇದರಲ್ಲಿ ಮಹಿಳೆಯ ಆತ್ಮ ಅಥವಾ ಪುರುಷನ ಆತ್ಮ ಎಂಬ ಭೇದಕ್ಕೆ ಸ್ಥಾನವೇ ಇಲ್ಲ. ಆದ್ದರಿಂದ ಈ ಆಧ್ಯಾತ್ಮಿಕ ಆಹಾರವನ್ನು ಪಡೆಯದಂತೆ ಯಾರನ್ನೂ ತಡೆಯಬಾರದು, ಹಾಗೆ ಮಾಡುವುದು ಅನ್ಯಾಯ ಎಂಬುದಾಗಿ ತಿಳಿಸಿದರು. ಅವರು ಮಹಿಳೆಯರ ವೈಶಿಷ್ಟ್ಯ, ಸ್ವಂತಿಕೆ ಹಾಗೂ ಸ್ವಾತಂತ್ರ್ಯಗಳಿಗೆ ಮನ್ನಣೆ ತೋರಿದರು ಮತ್ತು ತಮ್ಮದೇ ದಾರಿಯಲ್ಲಿ ಮೋಕ್ಷವನ್ನು ಸಾಧಿಸುವ ಹಕ್ಕು ಅವರಿಗಿದೆ ಎಂಬುದನ್ನು ಒಪ್ಪಿ ಗೌರವಿಸಿದರು.

ವೇದ ಮೊದಲು ಹಿಂತೆಗೆದರೂ ಬುದ್ಧ ಆ ನಂತರ ಮಹಿಳೆಯರ ಆಧ್ಯಾತ್ಮಿಕ ಮಟ್ಟವನ್ನು ಹೆಚ್ಚಿಸಬೇಕೆಂಬ ಪ್ರಧಾನ ಉದ್ದೇಶದಿಂದ ಹಾಗೂ ವಿಧವೆಯರಿಗೆ ಶಾಂತಿ, ಸಮಾಧಾನ ನೀಡುವ ಉದ್ದೇಶದಿಂದ ಒಂದು ಪ್ರತ್ಯೇಕವಾದ ಧಾರ್ಮಿಕ ಸಂಸ್ಥೆಯಾಗಿ ಬೌದ್ಧ ಭಿಕ್ಷುಕಿಯರ ವರ್ಗವೊಂದನ್ನು ಉದ್ಘಾಟಿಸಿದರು. ಹೀಗೆ ಬುದ್ಧ ಮಹಿಳೆಯರ ಸ್ಥಾನ ಹಾಗೂ ಹಕ್ಕುಗಳನ್ನು ಉತ್ತಮಪಡಿಸಿದನು. ಇದರ ಪರಿಣಾಮವಾಗಿ "ಥೇರಿ" ಅಂದರೆ ಜ್ಞಾನ ವೃದ್ಧೆ ಮಹಿಳೆಯರು ಎಂದು ಕರೆಯಲಾದ ಧರ್ಮನಿಷ್ಠ

ಹಾಗೂ ಪ್ರತಿಭಾವಂತ ಭಿಕ್ಷುಕಿಯರ ಪಂಥವು ಧಾರ್ಮಿಕ ಮತ್ತು ಸಾಹಿತ್ಯ ಕ್ಷೇತ್ರಗಳಲ್ಲಿ ಅಸ್ತಿತ್ವಕ್ಕೆ ಬಂದಿತು. ರಾಜರ ಆಸ್ಥಾನದ ನರ್ತಕಿಯರು ಹಾಗೂ ವೇಶ್ಯಾಂಗನೆಯರೂ ಸಹ ಯಾವ ವಿಧವಾದ ಅಡ್ಡಿ–ಆತಂಕಗಳೂ ಇಲ್ಲದೆ ಧಾರ್ಮಿಕ ಭಿಕ್ಷುಕಿಯರಾಗಬಹುದಿತ್ತು. ಈ ನೆಲೆಯಲ್ಲಿ ಅರ್ಥೈಸಿಕೊಳ್ಳುವುದಾದರೆ ಮಹಿಳೆಯರು ಆಧ್ಯಾತ್ಮಿಕ ಮಾರ್ಗದಲ್ಲಿ ಅಪೂರ್ವ ಸಾಧನೆ ಗಳಿಸುವುದಕ್ಕೆ ಬೇಕಾಗಿದ್ದ ಅವಕಾಶ ಹಾಗೂ ಸ್ವಾತಂತ್ರ್ಯದ ಹಕ್ಕನ್ನು ಹೊಂದಿದ್ದರು ಎಂಬು ಹೇಳಬಹುದು.

ಆಧ್ಯಾತ್ಮಿಕ ಕ್ಷೇತ್ರದಲ್ಲಿ ಲಿಂಗಭೇದಕ್ಕೆ ಅವಕಾಶವೇ ಇರಲಿಲ್ಲ. ಜಾತಕಗಳಲ್ಲಿ ಆಧ್ಯಾತ್ಮಿಕ ರಂಗದಲ್ಲಿ ಉನ್ನತ ಸ್ಥಾನವನ್ನು ಗಳಿಸಿದ್ದ ಕಿಸಗೌತಮಿ, ಸೋನಾ ಮತ್ತು ಸಿಂಗಲಿಮಾತಾ ಮುಂತಾದ ಅನೇಕ ಮಹಿಳೆಯರ ಬಗ್ಗೆ ಉಲ್ಲೇಖಗಳಿವೆ. ಬೌದ್ಧ ಭಿಕ್ಷುಕಿಯರಂತೆ ಮಠಗಳಿಗೆ ಸೇರದಿದ್ದ ಮತ್ತು ತಪಸ್ಸು ಕಠಿಣ ನಿಯಮ, ಶಿಸ್ತು ಹಾಗೂ ಶಾರೀರಿಕ ಕಷ್ಟಗಳಿಂದ ಕೂಡಿದ್ದ ಜೀವನವನ್ನು ನಡೆಸಲು ಅಸಮರ್ಥರಾಗಿದ್ದ ಹಾಗೂ ಲೌಕಿಕ ಜೀವನವನ್ನು ನಡೆಸುತ್ತಿದ್ದ ಮಹಿಳೆಯರ ಸ್ಥಾನಮಾನವೂ ಸಹ ಉತ್ತಮಗೊಂಡಿತು ಎಂದು ಹೇಳಬಹುದು. ಎಲ್ಲಾ ವಿಧವಾದ ಧಾರ್ಮಿಕ ಹಾಗೂ ದಾನಶೀಲ ಕಾರ್ಯಕಲಾಪಗಳನ್ನು ನಡೆಸಲು ಮತ್ತು ಎಲ್ಲಾ ತರದ ನೈತಿಕ ಗುಣಗಳನ್ನು ಬೆಳೆಸಿಕೊಂಡು ಸಚ್ಚಾರಿತ್ಯದಿಂದ ಕೂಡಿದ ವ್ಯಕ್ತಿತ್ವವನ್ನು ಹೊಂದಲು ಅವರಿಗೆ ಅವಕಾಶಗಳನ್ನು ಕೊಡಲಾಗಿದ್ದಿತು. ಯಾವುದೇ ಅಡಚಣೆ ಇಲ್ಲದಂತೆ ಧರ್ಮವನ್ನು ಅನುಸರಿಸಿಕೊಂಡು ಬರಲು ಬೌದ್ಧ ಭಿಕ್ಷುಗಳಿಗೆ ಈ ಮಹಿಳೆಯರು ಶಕ್ತಿ ಮೀರಿ ಸಹಾಯ ಮಾಡುತ್ತಿದ್ದರು ಎಂಬುದರಲ್ಲಿ ಅವರ ಮಹತ್ವ ವ್ಯಕ್ತವಾಗುತ್ತಿತ್ತು.

ಮನೆಯಲ್ಲಿ ಮಹಿಳೆಯರು ಗುಲಾಮರಾಗೇನೂ ಇರಲಿಲ್ಲ. ಅವರವರ ಪತಿಯರಂತೆ ಅವರಿಗೆ ಸಮಾನ ಸ್ಥಾನಮಾನ ಹಾಗೂ ಕೆಲವು ಹಕ್ಕುಗಳನ್ನು ಕೊಟ್ಟು ಗೌರವಿಸಲಾಗಿತ್ತು. ಅವರು ತಮ್ಮ ಪತಿಯರು ಕೈಗೊಂಡಿದ್ದ ಕಸುಬುಗಳಲ್ಲಿ ಪಾಲುದಾರರಾಗಬಹುದಿತ್ತು. ಸ್ವತಂತ್ರವಾಗಿ ಯಾವುದಾದರೂ ಲಾಭಕರವಾದ ವೃತ್ತಿಯನ್ನು ಕೈಗೊಳ್ಳಬಹುದಾಗಿತ್ತು. ಆಸ್ತಿ–ಪಾಸ್ತಿಗಳ ಮೇಲೆ ಮಹಿಳೆಯರಿಗೂ ಸಮಾನಾಧಿಕಾರಗಳಿದ್ದವು. ಅವರು ಯಾವುದನ್ನಾದರೂ ಸ್ವತಂತ್ರವಾಗಿ ಯಾರ ಸಲಹೆಯನ್ನು ಕೇಳದೆ ತಮಗಿಷ್ಟ ಬಂದವರಿಗೆ ದಾನ ಮಾಡಬಹುದಾಗಿತ್ತು. ಕಾನೂನಿನ ಪ್ರಕಾರ ಮಗಳಿಗೂ ಆಸ್ತಿಯಲ್ಲಿ ಹಕ್ಕಿತ್ತು. ಅವಳು ತನ್ನ ತಾಯಿಯ ಕಡೆಯಿಂದ ಬಂದ ಆಸ್ತಿ ಹಾಗೂ ಸ್ತ್ರೀ ಧನವನ್ನಲ್ಲದೆಯೇ ತಂದೆಯ ಆಸ್ತಿಯಲ್ಲೂ ಪಾಲನ್ನು ಪಡೆಯುವ ಹಕ್ಕನ್ನೂ ಹೊಂದಿದ್ದಳು. ಸುಂದರಿ ಎಂಬ ಹೆಸರಿನ ಮಗಳೊಬ್ಬಳು ತನ್ನ ತಂದೆಯ ಸಮಸ್ತ ಆಸ್ತಿಗೆ ಹಕ್ಕುದಾರಳಾದಳು ಎಂಬುದನ್ನು ದಾಖಲು ಮಾಡಲಾಗಿದೆ. ಬೌದ್ಧ ಧರ್ಮ ಕಾಲದಲ್ಲಿ ಮಹಿಳೆಯರು ನ್ಯಾಯಾಧೀಶರಾಗಿಯೂ ಪಾತ್ರವಹಿಸಿದ್ದರು. ಬುದ್ಧ ಸ್ವತಃ ಒಂದು ವಿವಾಹದ ಬಗ್ಗೆ ನ್ಯಾಯಬದ್ಧ ವಿಚಾರಣೆ ನಡೆಸಿ ಸಮರ್ಪಕ ನ್ಯಾಯ ನೀಡುವ ಜವಾಬ್ದಾರಿ ಕಾರ್ಯವನ್ನು ವಿಶಾಖ ಎಂಬ ಧರ್ಮನಿಷ್ಠ ಮಹಿಳೆಗೆ ವಹಿಸಿದ್ದರು ಎಂದು ಹೇಳಲಾಗಿದೆ.

ಈ ಕಾಲದಲ್ಲಿ ಹೆಣ್ಣು ಮಕ್ಕಳು ಹುಟ್ಟಿದ್ದರೆ ತಂಗೆ ತಾಯಿಗಳು ನಿರಾಶೆಗೊಂಡು ಸಂಕಟಪಡುತ್ತಿರಲಿಲ್ಲ. ಇದು ನಿಜಕ್ಕೂ ಮಹಿಳೆಯ ಬಗ್ಗೆ ಇದ್ದ ಉತ್ತಮ ಸ್ಥಾನಮಾನವನ್ನು ತಿಳಿಸುತ್ತದೆ. ಈ ಹಿಂದೆ ಇದ್ದ ಎಲ್ಲಾ ನಿಯಮಗಳಿಗೆ ವಿರುದ್ಧವಾಗಿ ಬೌದ್ಧ ಶಾಸನ ವಿಧಿಗಳು ಮತ್ತು ತತ್ವಗಳು ಹೆಣ್ಣು ಮಕ್ಕಳನ್ನು ದತ್ತು ತೆಗೆದುಕೊಳ್ಳಬಹುದು. ಆ ಪದ್ಧತಿ

ಸಪ್ರಮಾಣವಾದುದು ಎಂಬುದಾಗಿ ಎತ್ತಿ ಹಿಡಿದವು. ಇದು ನಿಜಕ್ಕೂ ಅತ್ಯಂತ ನವೀನ ಅನ್ವೇಷಣೆಯಾಗಿತ್ತು. ಇದರಿಂದ ಮೊದಲ ಬಾರಿಗೆ ಮಹಿಳೆಯರಿಗೆ ಮಾನ್ಯವಾದ ಸ್ಥಾನವನ್ನು ಕೊಡಲಾಯಿತೆಂದು ಹೇಳಬಹುದು.

ಬೌದ್ಧ ಧರ್ಮದಲ್ಲಿ ವಿಧವೆಯರ ಸ್ಥಿತಿ ಶೋಚನೀಯವಾಗಿರಲಿಲ್ಲ. ಅಂದರೆ ಬಹುಮಟ್ಟಿಗೆ ಸುಧಾರಿಸಿತ್ತು. ವಿಧವೆಯರು ಮನೆಗಳಲ್ಲಿ ನಡೆಯುತ್ತಿದ್ದ ಉತ್ಸವ ಸಮಾರಂಭಗಳಲ್ಲಿ ಸ್ವತಂತ್ರವಾಗಿ ಭಾಗವಹಿಸುವ ಹಕ್ಕನ್ನು ಹೊಂದಿದ್ದರು. ಅವರನ್ನು ಯಾರೂ ಸಹ ದೂಷಿಸಿ, ಅವಮಾನಗೊಳಿಸುತ್ತಿರಲಿಲ್ಲವೆಂದು ಬೌದ್ಧ ಗ್ರಂಥಗಳಲ್ಲಿ ಕಂಡು ಬರುವ ಉಲ್ಲೇಖಗಳು ಸೂಚಿಸುತ್ತವೆ. ವಾಸ್ತವದಲ್ಲಿ, ಅವರೂ ಸಹ ಕುಟುಂಬಕ್ಕೆ ಸೇರಿದ ಇತರ ಅದೃಷ್ಟವಂತ ಸದಸ್ಯರಂತೆ ಎಲ್ಲಾ ವಿಧವಾದ ಗೌರವ ಮತ್ತು ಹಕ್ಕು ಬಾಧ್ಯತೆಗಳನ್ನು ಪಡೆದಿದ್ದರು. ಅದಕ್ಕಿಂತ ಹೆಚ್ಚಾಗಿ, ತಮ್ಮ ಪತಿಯರ ಆಸ್ತಿಗಳಿಗೆ ಉತ್ತರಾಧಿಕಾರಿಗಳಾಗಿ ಸಾವಿನ ಕರೆ ಬರುವವರೆಗೆ ಅವುಗಳನ್ನು ನೋಡಿಕೊಳ್ಳುವ ಹಕ್ಕು ಅವರಿಗಿತ್ತು. ಉದಾಹರಣೆಗೆ : 'ದಮ್ಮದೀನ' ಎಂಬ ಉತ್ತಮಶೀಲ ಸ್ವಭಾವದ ವಿಧವೆಯು ತನ್ನ ಪತಿಯು ಬಿಟ್ಟು ಹೋಗಿದ್ದ ಅಪಾರ ಆಸ್ತಿಗೆ ಹಕ್ಕುದಾರಳಾಗಿ ಅದನ್ನು ಧಾರ್ಮಿಕ ವ್ಯವಸ್ಥೆಗಳಿಗೆ ದತ್ತಿಗಳನ್ನಾಗಿ ನೀಡಲು ಬಳಸಿದಳು ಎಂದು ಹೇಳಲಾಗಿದೆ. ಹಾಗೆಯೇ 'ಭಟ್ಟ ಕಪಾಲಿನಿ' ಎಂಬ ಇನ್ನೊಬ್ಬ ವಿಧವೆಯು ಅತ್ಯಂತ ಧನಿಕಳಾಗಿದ್ದಳು ಮತ್ತು ಐಹಿಕ ಜೀವನವನ್ನು ತ್ಯಜಿಸಿ, ಬೌದ್ಧ ಮಠಕ್ಕೆ ಸೇರಿ ಸನ್ಯಾಸಿನಿಯಾದ ಮೇಲೆ ತನ್ನ ಸಮಸ್ತ ಆಸ್ತಿಯನ್ನು ತನ್ನ ಸಂಬಂಧಿಕರಿಗೆ ಕೊಟ್ಟುಬಿಟ್ಟಳು ಎಂದು ಉಲ್ಲೇಖಿಸಲಾಗಿದೆ.

ಬ್ರಾಹ್ಮಣ, ವೈಶ್ಯ, ಕ್ಷತ್ರಿಯ, ಶೂದ್ರ ಮತ್ತು ದಲಿತ ಪುತ್ರಿಯರು ಬೌದ್ಧ ಧರ್ಮವನ್ನು ಸ್ವೀಕರಿಸಿದ ಉದಾಹರಣೆಗಳಿವೆ. ಬುದ್ಧ ವೈಶ್ಯೆ, 'ಆಮ್ರಪಾಲಿಯ' ಮನೆಯಲ್ಲಿಯೂ ಆತಿಥ್ಯವನ್ನು ಸ್ವೀಕರಿಸುತ್ತಾನೆ. ಆದ್ದರಿಂದ ಬೌದ್ಧ ಧರ್ಮದಲ್ಲಿ ವೃತ್ತಿಭೇದಗಳಿರಲಿಲ್ಲ; ಜಾತಿಭೇದಗಳಿರಲಿಲ್ಲ. ಆದ್ದರಿಂದ ಡಾ॥ ಬಾಬಾ ಸಾಹೇಬ್ ಅಂಬೇಡ್ಕರ್‌ರವರು ತಾವೂ ಬೌದ್ಧ ಧರ್ಮಕ್ಕೆ ಸೇರಿದ್ದಲ್ಲದೆ ತನ್ನ ಅನುಯಾಯಿಗಳನ್ನು ಬೌದ್ಧ ಧರ್ಮಕ್ಕೆ ಸೇರುವಂತೆ ಪ್ರೋತ್ಸಾಹಿಸುತ್ತಾರೆ. ಬೌದ್ಧ ಧರ್ಮವು ಸ್ತ್ರೀಯರಿಗೂ ವ್ಯಕ್ತಿತ್ವವಿದೆಯೆಂಬುದನ್ನು ಮಾನ್ಯ ಮಾಡುತ್ತದೆ. ಆದರೆ ಕೆಲವು ವಿಚಾರಗಳಲ್ಲಿ ಸ್ತ್ರೀಯರನ್ನು ಪ್ರತ್ಯೇಕವಾಗಿ ನೋಡಿರುವುದೂ ಇದೆ. ಬುದ್ಧನ ಒಂದು ಉಪದೇಶಗಳಲ್ಲಿ 'ಗಂಡನಿಗೆ ನಮ್ರ ಸೇವಕಿಯಾಗು' ಎಂದು ಸ್ತ್ರೀಯರಿಗೆ ಹೇಳಿದ್ದಿದೆ.

ಬೌದ್ಧ ಧರ್ಮದ ಮತಗಳು ಏನೇ ಇರಬಹುದು, ಆದರೆ ಅದು ಉಳಿದ ಎಲ್ಲಾ ಧರ್ಮಗಳಿಗಿಂತ ಮಾನವೀಯವಾದದ್ದು. ಸ್ತ್ರೀಯರಿಗೆ ಒಂದು ಬಿಡುಗಡೆ ಎಂಬುದನ್ನು ಈ ಧರ್ಮದಲ್ಲಿ ಕಾಣುತ್ತೇವೆ. ಈ ಎಲ್ಲಾ ನಿದರ್ಶನಗಳಿಂದ ತಿಳಿಯುವುದೇನೆಂದರೆ ಒಟ್ಟಾರೆ ಜೈನ ಹಾಗೂ ಬೌದ್ಧ ಧರ್ಮಗಳ ಕಾಲದಲ್ಲಿ ಮಹಿಳೆ ಕೆಲವು ಸೀಮಿತ ಹಕ್ಕುಗಳೂ, ಸ್ಥಾನಮಾನಗಳು ದೊರಕಿದ್ದವು ಎಂದರೆ ತಪ್ಪಾಗಲಾರದು. ಆದರೂ ಈ ಕಾಲದಲ್ಲಿ ಹೆಣ್ಣನ್ನು ಎರಡನೇಯ ದರ್ಜೆಯ ಪ್ರಜೆಯಾಗಿಯೂ ಸಹ ನೋಡಿದ್ದಾರೆ.

# ಅಧ್ಯಾಯ - 3

## ಮಧ್ಯಕಾಲೀನ ಹಾಗೂ ಸ್ವಾತಂತ್ರ್ಯ ಪೂರ್ವದಲ್ಲಿ ಮಹಿಳಾ ಹಕ್ಕುಗಳು

ಮಧ್ಯಯುಗವೆಂದರೆ ಕ್ರಿ.ಶ. ಸುಮಾರು 6ನೇ ಶತಮಾನದಿಂದ 17ನೇ ಶತಮಾನದವರೆಗೆ ವಿಸ್ತರಿಸಿಕೊಳ್ಳುತ್ತದೆ. ಇದು ರಾಜರ ಆಳ್ವಿಕೆಯ ಕಾಲ. ಪ್ರಭು ಸಂಹಿತೆಯನ್ನು ಜನರು ಒಪ್ಪಿ ನಡೆಯುತ್ತಿದ್ದು, ಪ್ರಭುವೇ ಪರಮಾಧಿಕಾರವನ್ನು ಹೊಂದಿದ್ದು, ಜನರ ಆಜ್ಞಾಪಾಲಕರಾಗಿದ್ದರು. ಭಾರತದ ಸಂದರ್ಭದಲ್ಲಿ ಈ ಅವಧಿ ಸುಮಾರು ಗುಪ್ತರ ಕಾಲದಿಂದ ಹಿಡಿದು ವಿಜಯನಗರದ ಅರಸರ ಕಾಲದವರೆಗೂ ಹೇಳಬಹುದು. ಈ ವೇಳೆಗಾಗಲೇ ಸ್ಮೃತಿಕಾರರ ಸಾಮಾಜಿಕ ಕಾನೂನುಗಳ ರಚನೆಯಾಗಿದ್ದವು. ಅವು ಧಾರ್ಮಿಕ ಶಾಸನಗಳಾಗಿ ಎಲ್ಲರೂ ಚಾಚೂ ತಪ್ಪದೆ ಅನುಸರಿಸುತ್ತಿದ್ದರು. ಅಲ್ಲಿಯವರೆಗೆ ಸ್ವಲ್ಪಮಟ್ಟಿಗೆ ಸ್ವಾತಂತ್ರ್ಯವನ್ನು ಅನುಭವಿಸುತ್ತಿದ್ದ ಹೆಣ್ಣು ಮಧ್ಯಯುಗದಲ್ಲಿ ಹೀನಾಯ ಸ್ಥಿತಿಗೆ ಬಂದಳು.

ಆಸ್ತಿಯ ಹಕ್ಕು ಮತ್ತು ಸ್ವಾತಂತ್ರ್ಯವನ್ನು ಹೆಣ್ಣಿಗೆ ನಿರಾಕರಿಸಲಾಯಿತು. ಬ್ರಾಹ್ಮಣ ಹೆಂಗಸಿನ ಜೊತೆ ಸಂಭೋಗ ಮಾಡಲು ಸಾಮಾಜಿಕ ಅಶ್ಲೀಲತೆಯ ಯಾವ ತೊಡಕು ಇಲ್ಲದಂಥ ಸಾರ್ವತ್ರಿಕ ಹಕ್ಕುಂಟು ಎಂದು ಪ್ರತಿಪಾದಿಸಲಾಯಿತು. ಜೊತೆಗೆ ಸತ್ತ ಗಂಡನ ಚಿತೆಯೇರಿ ಸಾಯುವ ಸತಿ ಸಹಗಮನ ಪದ್ಧತಿ, ಬಾಲ್ಯವಿವಾಹ ಪದ್ಧತಿ ಹಾಗೂ ವಿಧವೆಯರ ಮರುವಿವಾಹವನ್ನು ನಿಷೇಧಿಸಲಾಯಿತು. ಧರ್ಮಶಾಸ್ತ್ರದ ಕಟ್ಟಳೆಗಳು, ಕಟ್ಟುಪಾಡುಗಳು, ಮೂಢನಂಬಿಕೆಗಳು ಬಲಗೊಂಡು ಹೆಣ್ಣಿನ ವ್ಯಕ್ತಿ ಸ್ವಾತಂತ್ರ್ಯವನ್ನೇ ದಮನ ಮಾಡಲಾಯಿತು. ಹೆಣ್ಣು ಅಸಹಾಯಕಳು ಎಂಬುದನ್ನು ಎತ್ತಿಹಿಡಿಯಿತು.

ಅಂದರೆ ಮಧ್ಯಕಾಲೀನ ಭಾರತದಲ್ಲಿನ ಮಹಿಳೆಯ ಸ್ಥಿತಿ ಭಿನ್ನವಾಗೇನೂ ಇರಲಿಲ್ಲ. ಹಿಂದಿನ ಯುಗದಲ್ಲಿ ರೂಢಿಗೆ ಬಂದಿದ್ದ ಬಾಲ್ಯವಿವಾಹ ವಿಧವಾ ವಿವಾಹ ನಿಷೇಧ, ಕುಟುಂಬ ಆಸ್ತಿಯಲ್ಲಿ ಭಾಗಸ್ಥಳಾಗುವ ಹಕ್ಕಿನ ತಿರಸ್ಕಾರ, ದೇವದಾಸಿ ಪದ್ಧತಿ, ಸತಿ ಇನ್ನೂ ಮುಂತಾದ ಆಚರಣೆಗಳು ಈ ಕಾಲಮಾನದಲ್ಲೂ ಮುಂದುವರಿದವು. ಅಲ್ಲದೆ ಮಹಿಳೆಯರ ಬಗ್ಗೆ ಕೆಲವು ಹೀನ ಭಾವನೆಗಳೂ ಸಹ ಬೆಳೆಯಲಾರಂಭಿಸಿದವು. ಮಹಿಳೆಯರ ಏಕಾಂತತೆ, ಪ್ರತ್ಯೇಕತೆಗಳು ಇನ್ನಷ್ಟು ಜಟಿಲವಾಗಿ ಕೆಳಮಧ್ಯಮ ವರ್ಗಗಳ ಮಹಿಳೆಯರೂ ಸೇರಿದಂತೆ ಹಲವು ಹಕ್ಕುಗಳಿಂದ ದೂರವಿರಬೇಕಾಯಿತು.

ಗುಪ್ತರ ಕಾಲದಲ್ಲಿ ರಚಿತವಾದ ಸ್ಮೃತಿಗಳು, ಸ್ತ್ರೀ ವಿರೋಧಿ, ಕಾನೂನುಗಳು ಮತ್ತು ಸಾಂಪ್ರದಾಯಗಳು ತತ್ವಶಃ ಅನುಷ್ಠಾನಗೊಂಡಿದ್ದರಿಂದ ಸ್ತ್ರೀಯರ ಸ್ಥಾನಮಾನಗಳಲ್ಲಿ ಸ್ಪಷ್ಟವಾಗಿಯೇ ಅವನತಿ ಕಂಡುಬಂದಿತು. ವಂಶಪಾರಂಪರ್ಯವಾದ ಆಸ್ತಿಯೂ ಅವಳಿಗಿಲ್ಲ ಹಾಗೂ ತಾನೇ ಗಳಿಸಿದ ಆಸ್ತಿಗೂ ಆಕೆ ಒಡತಿಯಲ್ಲ. ಈಗಲೂ ಕಂಡು ಬರುತ್ತಿರುವ ಹೆಣ್ಣಿನ ಸ್ಥಿತಿಗತಿಗಳಿಗೆ ಕಾರಣಗಳು ಗುಪ್ತರ ಕಾಲದಲ್ಲಿಯೇ ಸಿಗುತ್ತವೆ. ಆಕೆಗಿದ್ದ ಸೀಮಿತ ಹಕ್ಕೆಂದರೆ ಕೇವಲ ಧನವನ್ನು ಮಾತ್ರ, ಅಂದರೆ ಒಡವೆ ವಸ್ತ್ರಗಳನ್ನು ಇಟ್ಟುಕೊಳ್ಳುವುದು. ಇದಕ್ಕೆ ನಿದರ್ಶನವೆಂಬಂತೆ ಈಗಲೂ ಸಹ ಹೆಣ್ಣು ಮಕ್ಕಳು ಈ ಎರಡು ವಸ್ತ್ರಗಳನ್ನು ಹೆಚ್ಚಾಗಿ ಜೋಪಾನ ಮಾಡುವುದು ಕಂಡುಬರುತ್ತದೆ.

ಮಧ್ಯಯುಗದಲ್ಲಿ ಮತ್ತೊಂದು ಸಾಮಾಜಿಕ ಕಷ್ಟವೆಂದರೆ ಹೆಣ್ಣನ್ನು ರಾಜರುಗಳು ತಮ್ಮ ಭೋಗದ ವಸ್ತುವಾಗಿ ಭಾವಿಸಿಕೊಂಡು ತಮ್ಮ ಕಾಮಪ್ರಚೋದನೆಯ ಆಟಿಕೆಗಳಾಗಿ ನಡೆಸಿಕೊಂಡಿದ್ದನ್ನು ಕಾಣಬಹುದು. ಇಲ್ಲಿ ಹೆಣ್ಣನ್ನು

ಯಶಸ್ವಿಯಾಗಿ ಕಾಣಲಾಗುತ್ತಿತ್ತು. ಪತಿವ್ರತಾ ಧರ್ಮವೆಂಬ ಹೆಸರಿನಲ್ಲಿ ಸ್ತ್ರೀಯರನ್ನು ಪುರುಷರು ಗುಲಾಮರನ್ನಾಗಿಸಲಾಯಿತು. ಪರಪುರುಷನ ಬಗ್ಗೆ ಆಕೆ ಯೋಚಿಸುವುದು ಮಹಾಪಾಪವೆಂದು ಪರಿಗಣಿಸಲಾಗಿತ್ತು. ಪುರುಷ ಮಾತ್ರ ಎರಡನೆಯ ಮಡದಿಯನ್ನು ಹೊಂದುವ ಹಕ್ಕಿತ್ತು. ಆದರೆ ಹೆಣ್ಣುವೂ ಸಹ ನಿಷ್ಠೆ ವಿಧೇಯತೆಯನ್ನು ಹೊಂದಿ ಮರುವಿವಾಹದ ಹಕ್ಕಿನಿಂದ ತಿರಸ್ಕೃತಳಾಗಿದ್ದಳು.

ಮಧ್ಯಕಾಲೀನ ಭಾರತದಲ್ಲಿ ದೇವದಾಸಿ ಪದ್ಧತಿಯ ಬೆಳೆದು ಬಂದಿತು. ಪ್ರಾಚೀನ ಕಾಲದಲ್ಲಿ ಧರ್ಮದ ಹೆಸರಿನಲ್ಲಿ ಸ್ತ್ರೀಯರನ್ನು ನರ್ತಕಿಯರನ್ನಾಗಿ, ಸೇವಾ ಮನೋಭಾವದ ವೇಶ್ಯೆಯರನ್ನಾಗಿ ಬಿಡುವ ಪದ್ಧತಿ ಇತ್ತು. ದೇವರ ಸೇವೆಗೆಂದು ಆಕೆ ಧರ್ಮದ ನೆಲೆಯಲ್ಲಿ  ದೇವದಾಸಿಯಾಗಿ ಮುಡಿಪಾಗಿರುವ ಪದ್ಧತಿ ಇಂದು ಆರಂಭದಲ್ಲಿ ದೈವಭಕ್ತಿ ಹಾಗೂ ಧರ್ಮಶ್ರದ್ಧೆಯಿಂದ ಕೂಡಿದ್ದರೂ ಆ ಬಳಿಕ ಅದು ತನ್ನ ವಾಸ್ತವರ ಉದ್ದೇಶವನ್ನು ಕಳೆದುಕೊಂಡು ಈ ದೇವದಾಸಿಯರನ್ನೇ ವೇಶ್ಯೇಯರನ್ನಾಗಿ ಮಾಡಿದರು. ಇದರ ಪರಿಣಾಮವಾಗಿ ವೇಶ್ಯಾಂಗನೆಯರು ಸಾಮಾಜಿಕ ಬದುಕಿನ ಮೇಲೆ ತಮ್ಮ ಪ್ರಭುತ್ವವನ್ನು ಸ್ಥಾಪಿಸಲು ಸಹಾಯಕವಾಯಿತು. ಈ ದೇವದಾಸಿಯರಿಗೆ ಹುಟ್ಟಿದ ಹೆಣ್ಣು ಮಕ್ಕಳನ್ನು ಮತ್ತು ಹರಕೆ ಹೊತ್ತವರು ತಮಗೆ ಹೆಣ್ಣು ಮಗು ಹುಟ್ಟಿದಾಗ ಆಕೆಯನ್ನು ದೇವಸ್ಥಾನಗಳಿಗೆ 'ಬಸವಿ' ಬಿಡುವುದು ಕೂಡ ಇತ್ತು. ಈ ರೀತಿ ಧರ್ಮದ ಹೆಸರಿನಲ್ಲಿ ಮಾಡುವ ಅನೈತಿಕ ತೀರ್ಮಾನ ಕೈಗೊಳ್ಳಲು ಸ್ತ್ರೀಯರಿಗೆ ಯಾವುದೇ ಸ್ವಾತಂತ್ರ್ಯದ ಹಕ್ಕಿರಲಿಲ್ಲ. ಹಿರಿಯರ ನಿರ್ಧಾರಗಳನ್ನು ಎದುರಿಸುವ ಸ್ವಾತಂತ್ರ್ಯವಾಗಲೀ, ಪ್ರತಿಭಟಿಸುವ ಸ್ಥೈರ್ಯವಾಗಲೀ ಅವರಲ್ಲಿ ಇರಲಿಲ್ಲ. ತುಂಬಿದ ಸಮಾಜದಲ್ಲಿ ಸ್ತ್ರೀಯು ನಿಷ್ಕ್ರಿಯರಾಗಿ ತಮ್ಮ ಪಾಲಿಗೆ ಬಂದುದ್ದನ್ನು ಅನುಭವಿಸಬೇಕಾದ ಸ್ಥಿತಿ ಬಂದೊದಗಿತ್ತು.

ಭಾರತದಲ್ಲಿ ಮುಸ್ಲಿಮರ ಆಳ್ವಿಕೆಯಲ್ಲಿ ಸ್ತ್ರೀಯ ಸ್ವಾತಂತ್ರ್ಯ ಮತ್ತು ಹಕ್ಕುಗಳನ್ನು ಮತ್ತಷ್ಟು ಮೊಟಕುಗೊಳಿಸಲಾಯಿತು. ಭಾರತದ ರಾಜಕೀಯ ಆಡಳಿತದಲ್ಲಿ ಮುಸ್ಲಿಮರ ಪ್ರವೇಶವಾಯಿತು. ಸುಮಾರು 12ನೇ ಶತಮಾನದ ವೇಳೆಗೆ ಮುಸ್ಲಿಮರ ಸಾಂಸ್ಕೃತಿಕ ಪ್ರಭಾವ ಭಾರತೀಯ ಸ್ತ್ರೀಯರ ಮೇಲೆ ಅತ್ಯಂತ ದಟ್ಟನಾಗಿ ಮಹತ್ತರವಾದ ಪರಿಣಾಮವನ್ನು ಉಂಟು ಮಾಡಿದ್ದು, ಅಲ್ಪ-ಸ್ವಲ್ಪ ಹೊಂದಿದ್ದ ಹಕ್ಕುಗಳನ್ನು ಮೊಟಕುಗೊಳಿಸುವುದರ ಜೊತೆಯಲ್ಲೇ ಆಕೆ ಮತ್ತೊಂದು ಕಠಿಣ ಪದ್ಧತಿಯ ಆಚರಣೆ ಮಾಡಲಾಯಿತು. ಅದೇ 'ಪರದಾ ಪದ್ಧತಿ' ಇದು ಮೇಲು ನೋಟಕ್ಕೆ ಸರಳವಾಗಿದ್ದರೂ ಸ್ತ್ರೀಯರ ಅಂತಃಶಕ್ತಿಯನ್ನು ಕೊಂದಿತ್ತು. ಮಾತ್ರವಲ್ಲದೆ ಸ್ತ್ರೀಯರ ವ್ಯಕ್ತಿತ್ವದ ವಿಕಸನಕ್ಕೆ ಅವಕಾಶ ನೀಡಲಿಲ್ಲ. ಸಾಮಾಜಿಕ ಶಿಕ್ಷಣ ಮತ್ತು ಸಾಮಾಜಿಕ ಸಂಪರ್ಕದಿಂದ ಸ್ತ್ರೀಯರು ವಂಚಿತರಾಗಿದ್ದರು.

ಸ್ತ್ರೀಯರು ಅಲಂಕಾರ ಮತ್ತು ಸೌಂದರ್ಯಕ್ಕೆ ಸೀಮಿತರಾದವರು ಎಂದು ತಿಳಿದು ಇದು ಸಾರ್ವಜನಿಕರಿಗೆ ಕಾಣಿಸದ ಹಾಗೆ ತಡೆ ಒಡ್ಡುವ ಪದ್ಧತಿಯೇ 'ಬುರ್ಕಾ ಪದ್ಧತಿ'. ಬುರ್ಕಾ ಹಾಕದೆ ತಿರುಗಾಡುವ ಮಹಿಳೆಯರನ್ನು ನಾಚಿಕೆ ಇಲ್ಲದವಳೆಂದು ಪರಿಗಣಿಸಿ, ಅವಹೇಳನ ಮಾಡುತ್ತಿದ್ದರು. ಈ ಪದ್ಧತಿಯಿಂದ ಮಹಿಳೆಯರನ್ನು ಅಶಿಕ್ಷಿತರನ್ನಾಗಿ, ಸಂಕುಚಿತ ದೃಷ್ಟಿಯವರನ್ನಾಗಿ ಮಾಡಿತು. ಇದರಿಂದ ಆಕೆಗೆ ತನ್ನ ಶರೀರದ ಮೇಲೆ ತನ್ನದೇ ನಿರ್ಣಯ ಕೈಗೊಳ್ಳುವ ಯಾವ ಹಕ್ಕು ಸಹ ಇಲ್ಲದಂತಾಯಿತು.

ವೇದಗಳ ಕಾಲದಲ್ಲಿ ವಿವಾಹದ ವಿಷಯದಲ್ಲಿ ಆಕೆಗಿದ್ದ ಸ್ವತಂತ್ರ ಹಕ್ಕುಗಳನ್ನು ಕಿತ್ತುಕೊಳ್ಳಲಾಯಿತು. ಹೆಣ್ಣು ಮಕ್ಕಳು, ತಂದೆ-ತಾಯಿಯರ ಮೇಲ್ವಿಚಾರಣೆ, ಹತೋಟಿ ಮತ್ತು ನಿರ್ದೇಶನದಂತೆ ಇರಬೇಕಾಗಿತ್ತು. ಅಲ್ಲದೆ ಹೆಣ್ಣು ಮಕ್ಕಳ ಒಪ್ಪಿಗೆಯನ್ನು ಪಡೆಯದೇ ತಂದೆ-ತಾಯಿಯರೇ ಮದುವೆಯನ್ನು ಮಾಡುತ್ತಿದ್ದರು. ಆಕೆ ಮದುವೆಯಾಗುವ ಗಂಡು ಒಪ್ಪಿಗೆ ಇರಲಿ, ಇಲ್ಲದಿರಲಿ ಹಿರಿಯರ ಆಣತಿಗೆ ತಲೆ ಬಾಗಲೇ ಬೇಕಿತ್ತು. ಹಿಂದೂಗಳಲ್ಲಿದ್ದ ಮತ್ತೊಂದು ಕೆಟ್ಟ ಆಚರಣೆಯೆಂದರೆ, ಒಂದು ಹೆಣ್ಣಿಗೆ ಒಬ್ಬ ಪುರುಷನೊಂದಿಗೆ ನಿಶ್ಚಿತಾರ್ಥವಾಗಿಬಿಟ್ಟರೆ ಮುಗಿಯಿತು. ಮುಂದೆ ಭಾವಿ ಪತಿಯಾಗಬೇಕಾಗಿದ್ದವನು ಅಕಸ್ಮಾತಾಗಿ ಮರಣ ಹೊಂದಿದರೆ ಆಕೆಯೂ ಸಹ ಭಾವಿ ಪತಿಯ ಚಿತಾಗ್ನಿಗೆ ಆಹುತಿಯಾಗದಿದ್ದರೆ, ಕೇಶ ಮುಂಡನ ಮಾಡಿಸಿಕೊಂಡು ಕುಟುಂಬದವರ ತಿರಸ್ಕಾರ ದ್ವೇಷಗಳನ್ನು ಸಹಿಸಿಕೊಂಡು ಜೀವನ ಸಾಗಿಸಬೇಕಿತ್ತು.

ಈ ರೀತಿ ಬಾಲವಿಧವೆಯಾಗಬೇಕಾಗಿ ಬಂದ ನತದೃಷ್ಟ ಮಹಿಳೆಯರ ಬಾಳು ಈ ನಿಷೇಧದಿಂದ ನರಕ ಸದೃಶ್ಯವಾಯಿತು. ವಿಧವೆಯರನ್ನು ಅಮಂಗಳಕರ ವ್ಯಕ್ತಿಗಳೆಂದು ಪರಿಗಣಿಸಿ ಅವರಿಗೆ ಧಾರ್ಮಿಕ ಕ್ರಿಯೆಗಳಲ್ಲಿ ಭಾಗವಹಿಸುವ ಹಕ್ಕನ್ನು ನಿರಾಕರಿಸಿದ್ದಲ್ಲದೆ ಕುಟುಂಬದ ಪರಿಚಾರಿಕೆಯ ಕೆಲಸಕ್ಕೆ ನಿಯೋಜಿಸಿ ದಂಡಿಸಲಾಗುತ್ತಿತ್ತು. ಈ ರೀತಿಯ ಆಚರಣೆಯಿಂದಾಗಿ ಆಕೆ ತನ್ನ ಒಡೆತನದ ಹಕ್ಕಿನಿಂದ ದೂರವಿರುವಂತಾಯಿತು.

ಮುಸಲ್ಮಾನ ಮಹಿಳೆಯು ತನ್ನ ಪತಿಯ ಅಥವಾ ತಂದೆಯ ಆಸ್ತಿಯ ಭಾಗವನ್ನು ಮತ್ತು ಅದನ್ನು ಅವಳು ತನ್ನ ಇಷ್ಟ ಬಂದಂತೆ ವಿತರಿಸಲು ಸಂಪೂರ್ಣ ಹಕ್ಕನ್ನು ಹೊಂದಿದ್ದಳು. ವಿವಾಹ ನಂತರವೂ ಅವಳು ಈ ಹಕ್ಕನ್ನು ಉಳಿಸಿಕೊಂಡಿರುತ್ತಿದ್ದಳು. ವಿವಾಹಕ್ಕೆ ಪೂರ್ವಭಾವಿಯಾದ ಆಸ್ತಿ ವ್ಯವಸ್ಥೆಯು ಅವಳ ಇನ್ನೊಂದು ರಕ್ಷಣೆಯಾಗಿತ್ತು. ಆದರೆ ಹಿಂದೂ ಮಹಿಳೆಗೆ ಮಧ್ಯಯುಗದಲ್ಲಿ ತನ್ನ ಪತಿಯು ತಂದೆ-ತಾಯಿರ ಆಸ್ತಿಯ ಮೇಲೆ ಯಾವುದೇ ಆಸ್ತಿಯ ಹಕ್ಕು ಇರಲಿಲ್ಲ. ಹಿಂದೂ ಮಹಿಳೆಗೆ ಅನ್ನ ಬಟ್ಟೆ ಇತ್ಯಾದಿ – ಜೀವನೋಪಾಯ ಕಲ್ಪಿಸಿಕೊಳ್ಳಲು ಅವಕಾಶವಿತ್ತು. ಇದರ ಜೊತೆಗೆ ಆಭರಣಗಳು, ಒಡವೆಗಳು, ಬೆಲೆ ಬಾಳುವ ವಸ್ತ್ರಗಳು ಮುಂತಾದ ಚರ ಆಸ್ತಿಯನ್ನು ಪಡೆಯುವ ಅಧಿಕಾರವಿತ್ತು.

ಹೀಗೆ ಕಾನೂನಿನ ಪ್ರಕಾರ ಸ್ತ್ರೀಯರು ಬದುಕಿನ ಎಲ್ಲಾ ಕ್ಷೇತ್ರಗಳಲ್ಲಿಯೂ ಅವಲಂಬಿತರೇ ಆಗಿದ್ದರು. ಜಾತಿ ವ್ಯವಸ್ಥೆ ಬಲವಾಗಿದ್ದು, ಜಾತಿಯ ನಿಯಮಗಳು ಕೂಡ ಸ್ತ್ರೀಯರನ್ನು ಬಂಧಿಸಿದ್ದವು. ಅದರಲ್ಲೂ ಮೇಲ್ಜಾತಿಯವರೆನಿಸಿಕೊಂಡವರು ಹೆಣ್ಣನ್ನು ಗೃಹಕ್ಷೇತ್ರಗಳಿಗೆ ಮಾತ್ರ ಸೀಮಿತರನ್ನಾಗಿಸಿಕೊಂಡಿದ್ದರು. ಶೂದ್ರರಲ್ಲಿ ಮಾತ್ರ, ಅಲ್ಲಿಯೂ ವ್ಯವಸಾಯ, ಕೂಲಿಕಾರರು, ಕೋಳಿ ಸಾಕಾಣಿಕೆ, ಕುರಿ ಸಾಕಾಣಿಕೆ ವೃತ್ತಿಯಲ್ಲಿ ನೆರವಾಗುವುದು, ನೂಲುವುದು, ನೇಯುವುದು, ಬೇಸಾಯ, ಬಟ್ಟೆ ಹೊಲಿಯುವುದು ಇತ್ಯಾದಿಗಳಲ್ಲಿ ತಮ್ಮ ಕೌಶಲ್ಯವನ್ನು ಸ್ತ್ರೀಯರು ಅಭಿವ್ಯಕ್ತಿಸುತ್ತಿದ್ದರು.

ಇಡೀ ಸಾಮಾಜಿಕ ಪರಿಸರವು ಆಕೆಯ ಉನ್ನತಿಗೆ ಅನಾನುಕೂಲಕರವಾಗಿದ್ದರೂ ಸಹ ಇಂತಹ ಅವಧಿಗಳಲ್ಲಿ ತಮ್ಮದೇ ಆದ ಪಾಂಡಿತ್ಯ, ಪ್ರತಿಭೆ ಹಾಗೂ ಸಾಮರ್ಥ್ಯವನ್ನು ತೋರಿದ್ದಾರೆ. ಭಕ್ತಿ ಆಂದೋಲನವು ಭರದಿಂದ ಸಾಗಿದ್ದು, ರಾಜಾಸ್ಥಾನದ 'ಮೀರಾಬಾಯಿ' ಎಂಬ ಮಹಿಳೆಯು ಭಗವಾನ್ ಶ್ರೀ ಕೃಷ್ಣನ ಮೇಲೆ ಹಲವಾರು ಕೀರ್ತನೆ, ಭಜನೆಗಳನ್ನು ರಚಿಸಿ ತಮ್ಮ ಪಾಂಡಿತ್ಯವನ್ನು ಮೆರೆದಿದ್ದಾರೆ. ಜೊತೆಗೆ ಆ ಭಜನೆಗಳನ್ನು ತಾವೇ ಹಾಡಿ ಮಹಾನ್ ಕೃಷ್ಣ

ಭಕ್ತೆ ಎನಿಸಿಕೊಂಡಳು. ಆಕೆಯ ಭಜನೆಗಳು 'ಮೀರಾಭಜನೆಗಳು' ಎಂದು ಇಂದಿಗೂ ಖ್ಯಾತವಾಗಿದೆ. ಅಂದರೆ ತನ್ನ ಪಾಂಡಿತ್ಯ ಪ್ರತಿಭೆಯನ್ನು ತನ್ನ ಸಾಮರ್ಥ್ಯದ ಹಿನ್ನೆಲೆಯಿಂದ ಬಳಸಿಕೊಳ್ಳುವುದರ ಮೂಲಕ ಶಿಕ್ಷಣದ ಹಕ್ಕನ್ನು ಹೊಂದುವಂತಾಯಿತು. ದಕ್ಷಿಣ ಭಾರತದಲ್ಲಿ ಮೈಸೂರಿನ ಚಿಕ್ಕದೇವರಾಜ ಒಡೆಯರ್‌ರವರ ಆಸ್ಥಾನದಲ್ಲಿ ಸಭೆಯ ಹೊನ್ನಮ್ಮಳು ಸಹ 'ಹದಿಬದೆಯ ಧರ್ಮ' ಎಂಬ ಕೃತಿಯಲ್ಲಿ ಹೆಣ್ಣಿನ ಸ್ಥಾನಮಾನಗಳ ಬಗೆಗೆ ತುಂಬಾ ಶಕ್ತಿಯುತವಾಗಿ ಚಿತ್ರಿಸಿದ್ದಾಳೆ. ಧರ್ಮಶಾಸ್ತ್ರದಲ್ಲಿನ ಸಂಗತಿಗಳನ್ನೆಲ್ಲ ಸಂಗ್ರಹಿಸಿ, ಹೆಣ್ಣಿನ ಬಗೆಗೆ ನಿಕೃಷ್ಟ ಭಾವವನ್ನು ತೋರುವವರನ್ನು ಕುರಿತು ಪ್ರತಿಭಟನಾತ್ಮಕ ನೆಲೆಯಲ್ಲಿ

ಪೆಣ್ಣಲ್ಲವೆ ತಮ್ಮನೆಲ್ಲ ಪಡೆದ ತಾಯಿ

ಪೆಣ್ಣಲ್ಲವೆ ಪೊರೆದವಳು

ಪೆಣ್ಣು ಪೆಣ್ಣೆಂದೇಕೆ ಬೀಳುಗಳೆವರು

ಕಣ್ಣು ಕಾಣದ ಗಾವಿಲರು

– ಎಂದು ಹೆಣ್ಣಿನ ಶ್ರೇಷ್ಠತೆಯನ್ನು ಕುರಿತು ಹೆಮ್ಮೆಯಿಂದ ಹೇಳಿದ್ದಾಳೆ. ಒಂದು ರೀತಿ ಸಮಾನತೆ ಹಾಗೂ ಹಕ್ಕುಗಳ ಸವಲತ್ತುಗಳನ್ನು ಕುರಿತು

ಕುವರನಾದೊಡೆ ಬಂದ ಗುಣವೇನದರಿಂದೆ

ಕುವರಿಯಾದೊಡೆ ಕುಂದೇನು?

ಎಂದು ಪ್ರಶ್ನಿಸಿ ಗೊಡ್ಡು ಪರಂಪರೆಗೆ ಸೆಡ್ಡೊಡೆವ ಪ್ರಖರತೆಯ ಪ್ರತಿಭಟನೆಯನ್ನು ತನ್ನ ಕೃತಿಯಲ್ಲಿ ಅಭಿವ್ಯಕ್ತಿಸಿದ್ದಾಳೆ. ಇವಳಿಗೂ ಮೊದಲೇ ಬದುಕಿನ ಹೋರಾಟದ ಹಾದಿಯನ್ನು ಕಂಡವಳು. ಅಕ್ಕಮಹಾದೇವಿ ಈಕೆ ಆ ಕಾಲದಲ್ಲೇ ಸಾಮಾಜಿಕ ವ್ಯವಸ್ಥೆ ಮತ್ತು ರಾಜ ಪ್ರಭುತ್ವಗಳೆರಡನ್ನೂ ಧಿಕ್ಕರಿಸಿ, ಜೀವನ ಪೂರ್ತಿ ಹೋರಾಡಿ ಬಂದ ಆದರ್ಶ ಮಹಿಳೆಯಾಗಿ ಕಂಡುಬರುತ್ತಾಳೆ. ಸಾಂಪ್ರದಾಯಿಕ ಸಮಾಜದ ವಿವಾಹ ನಿಯಮವನ್ನು ಧಿಕ್ಕರಿಸಿ, ಪುರುಷ ಪ್ರಧಾನ ಸಮಾಜದಲ್ಲಿ ಹೆಣ್ಣಿನ ಬಗೆಗಿದ್ದ ನಿಕೃಷ್ಟ ಸ್ಥಾನಮಾನ, ಕಿರುಕುಳ, ಹಿಂಸೆಗಳ ವಿರುದ್ಧ ಸೆಡ್ಡೊಡೆದು ಪ್ರತಿಭಟನೆಗೈದ ಸ್ಥೈರ್ಯ ಮಹಿಳೆಯಾಗಿದ್ದಾಳೆ.

"ಕಿಚ್ಚಿಲ್ಲದ ಬೇಗೆಯಲ್ಲಿ ಬೆಂದೆನವ್ವ ಏರಿಲ್ಲದ ಗಾಯದಲ್ಲಿ ನೊಂದೆನವ್ವ" ಎಂಬಲ್ಲಿಯೂ ಸಂಸಾರದ ಹೇಯ ವಿಕಳಾ ವ್ಯವಸ್ಥೆಯ ಬಗ್ಗೆ ತನ್ನ ಮಾನಸಿಕ ತುಮುಲತೆಯನ್ನು ಹೇಳುತ್ತಾಳೆ. ಅಲ್ಲದೆ ಲೌಕಿಕ ಗಂಡನನ್ನು ಬಿಟ್ಟು ಅಲೌಕಿಕ ಗಂಡನನ್ನು ಹರಸುತ್ತಾ ಹೋರಾಟ ದಿಟ್ಟ, ಧೀಮಂತ ಹೆಣ್ಣೆಂದರೆ ಅಕ್ಕಮಹಾದೇವಿ. ನಿದರ್ಶನವೆಂಬಂತೆ –

ಸಾವಿಲ್ಲದ ಕೇಡಿಲ್ಲದ ರೋಸಿಲ್ಲದ ಚೆಲುವಂಗಾನೊಲಿದೆನವ್ವ!

ಎದೆಯಿಲ್ಲದ ಕಡೆಯಿಲ್ಲದ ತೆರಯಿಲ್ಲದ ಕುರುಹಿಲ್ಲದ

ಚೆಲುವಂಗಾನೊಲಿದೆನವ್ವ!

ಭಾವವಿಲ್ಲದ ಭಯವಿಲ್ಲದ ಚೆಲುವಂಗಾನೊಲಿದೆ!

ಕುಲ ಸೀಮೆಯಿಲ್ಲದ ನಿಸ್ಸೀಮ ಚೆಲುವಂಗಾನೊಲಿದೆ!

ಇದು ಕಾರಣ ಚೆನ್ನಮಲ್ಲಿಕಾರ್ಜುನ ಚೆಲುವ ಗಂಡನೆನಗೆ

ಈ ಸಾವ ಕೆಡುವ ಗಂಡರನೊಯ್ದು ಒಲೆಯೊಳಗಿಕ್ಕು ತಾಯೆ!

ತಮ್ಮ ಮನಸ್ಸು ಸಂವೇದನೆಯ ಮೂಲಕ ಕೃತಿಗಿಳಿಸಿ ಹಕ್ಕುಗಳ ಪಡೆಯಲು ಅಭಿವ್ಯಕ್ತಿಸಿದ್ದಾರೆ.

ರಾಜಕೀಯ ಕ್ಷೇತ್ರದಲ್ಲಿ ನೋಡಿದರೆ ಕೆಲವು ಹಕ್ಕುಗಳನ್ನು ತಾನೇ ಪಡೆದು ಸಮರ್ಥವಾಗಿ ಕಾರ್ಯನಿರ್ವಹಿಸಿರುವುದನ್ನೇ ಕಾಣುತ್ತೇವೆ. ಉದಾ.: ಪತಿ ಸೋಮಶೇಖರ ನಾಯಕನ ಮರಣಾ ನಂತರ ಬಿದನೂರಿನ ರಾಣಿ ಚೆನ್ನಮ್ಮ ರಾಜ್ಯವನ್ನು ಮುನ್ನಡೆಸಿದಳಲ್ಲದೆ ಔರಂಗಜೇಬನ ಸೈನ್ಯದ ವಿರುದ್ಧ ಹೋರಾಡಿದಳು. ಬಿಜಾಪುರದ ರಾಣಿ ಚಾಂದ್‌ಬೇಬಿಯು ತನ್ನ ಪತಿ ಆದಿಲ್‌ಶಹನ ಮರಣಾನಂತರ ತಾನೇ ರಾಜ್ಯವಾಳಿದ್ದಲ್ಲದೆ ಬಾದಷಹ ಅಕ್ಬರನ ಸೈನ್ಯದ ವಿರುದ್ಧವೂ ಸೆಣಸಿದ್ದಳು. ಜಹಂಗೀರನ ಪತ್ನಿ ನೂರ್ ಜಹಾನ್‌ಳು ಮೊಘಲರಲ್ಲಿನ ಶ್ರೇಷ್ಠ ರಾಣಿಯಾಗಿದ್ದು, ತನ್ನ ಪತಿಯ ಪರವಾಗಿ ಪರೋಕ್ಷವಾಗಿ ತಾನೇ ರಾಜ್ಯವಾಳುತ್ತಿದ್ದಳು. ಸೌಂದರ್ಯದ ಖನಿ ಎನಿಸಿದ್ದ ರಾಜಾ ಷಹಜಹಾನ್‌ನ ಪತ್ನಿ ರಾಣಿ ಮುಮ್ತಾಜಳು ಇತಿಹಾಸ ಪ್ರಸಿದ್ಧಳಾಗಿದ್ದು, ಆಗ್ರಾದ ತಾಜ್‌ಮಹಲ್ ಇಂದಿಗೂ ಆಕೆಯ ನೆನಪನ್ನು ತರುವಂತಿದೆ.

ಮೊಘಲರ ಆಳ್ವಿಕೆಯ ಅವಧಿಯಲ್ಲಿ ಹೀಗೆ ಸಮಾಜದ ಎತ್ತರದ ಶ್ರೇಣಿಗಳಲ್ಲಿದ್ದ ಮಹಿಳೆಯರ ಸ್ಥಾನ-ಮಾನದಲ್ಲಿ ಗಮನಾರ್ಹ ಪ್ರಗತಿ ಕಂಡು ಬಂದರೂ ವಾಸ್ತವದಲ್ಲಿ ಬಹುಸಂಖ್ಯಾತ ಮಹಿಳೆಯರು ಸಾಂಪ್ರದಾಯಿಕ ಕಟ್ಟು-ಪಾಡುಗಳು ಮತ್ತು ಸಾಮಾಜಿಕ ನಿಯಮಗಳ ಬಿಗಿ ಮುಷ್ಠಿಯಲ್ಲಿ ಸಿಲುಕಿ ನರಳಬೇಕಾಯಿತು ಎಂಬುದನ್ನು ಕಾಣಬಹುದು.

ಮಧ್ಯಯುಗದಲ್ಲಿ ಮಹಿಳೆಯರನ್ನು ನಡೆಸಿಕೊಂಡಿರುವುದು ದುಡಿಸಿಕೊಂಡಿರುವುದೆಲ್ಲ ಕಾಮುಕತೆಗೆ ಮಾತ್ರ. ವ್ಯವಸ್ಥೆಯ ಅಧಿಪತ್ಯ ಹಿಡಿದವರೇ ಅದನ್ನು ಪ್ರಧಾನವೆಂದು ಭಾವಿಸಿದರು. ಹೀಗಾಗಿ ಸಾಮಾನ್ಯ ಜನರ ಪಾಡನ್ನು ಕೇಳುವವರೇ ಇರಲಿಲ್ಲ.

ಈ ಯುಗದಲ್ಲಿ ವೈಜ್ಞಾನಿಕ ವಿಚಾರಶಕ್ತಿ ಬೆಳೆದಿರಲಿಲ್ಲವಾದ್ದರಿಂದ ಜನರು ಹೆಚ್ಚಾಗಿ ಮೂಢನಂಬಿಕೆಗಳಿಗೆ ಬಲಿಯಾಗಿದ್ದರು. ಬದುಕಿನ ಎಲ್ಲ ಸಮಸ್ಯೆಗಳಿಗೂ, ಆರೋಗ್ಯ ಕೆಟ್ಟರು, ಮಾಟ-ಮಂತ್ರ ಮಾಡಿಸುವುದು, ಭೂತ-ಪ್ರೇತ, ಪಿಶಾಚಿಗಳೇ ಕಾರಣವೆಂದು ನಂಬುವುದು. ಈ ರೀತಿಯಲ್ಲಿ ಬಲಿಯಾಗುತ್ತಿದ್ದವಳು ಹೆಣ್ಣು. ಆಕೆಯನ್ನೇ ಮಾಟಗಾತಿ ಎನ್ನುವ ಸಂಶಯ ಬಂದರೆ ಅವಳನ್ನು ಸುಡುವುದು ಇಲ್ಲವೆ ನೀರಿನಲ್ಲಿ ಮುಳುಗಿಸಿ ಕೊಲ್ಲುವುದು. ಇದಕ್ಕೆ ಕಾರಣ ತಿಳುವಳಿಕೆಯ ಮಟ್ಟ ಇಲ್ಲದಿರುವುದು. ತಿಳುವಳಿಕೆಯನ್ನು ಹೊಂದಲು ಶಿಕ್ಷಣದ ಆದ್ಯತೆಯ ಹಕ್ಕುಗಳ ಹೆಣ್ಣು ಮಕ್ಕಳಿಗೆ

ಇರಲಿಲ್ಲ. ಗಂಡು ಮಕ್ಕಳಿಗೆ ಶಿಕ್ಷಣ ನೀಡಲು ಗ್ರಾಮ ಶಾಲೆಗಳಿದ್ದಂತೆ ಹೆಣ್ಣು ಮಕ್ಕಳಿಗೆ ಪ್ರತ್ಯೇಕವಾದ ಶಾಲೆಗಳಿರಲಿಲ್ಲ. ಗಂಡು ಮಕ್ಕಳ ಜೊತೆ ಹೆಣ್ಣು ಮಕ್ಕಳು ಒಟ್ಟಿಗೆ ಕಲಿಯುವಂತಿರಲಿಲ್ಲ.

ಹೀಗೆ ಮಧ್ಯಯುಗದಲ್ಲಿ ಪಾಶ್ಚಾತ್ಯರಲ್ಲಿಯೂ ಸ್ತ್ರೀಯರ ಸ್ಥಿತಿಗತಿಗಳು ಆತಂಕಕಾರಿಯಾಗಿದ್ದವು. ಸಾಮಾಜಿಕ ಕಟ್ಟಳೆಗಳು ಬಲವಾಗಿದ್ದವು. ಸ್ತ್ರೀಯರ ಸಹಜ ವಿಕಸನಕ್ಕೆ ಸಾಧ್ಯತೆಗಳ ಕೊರತೆ ಇತ್ತು. ಇಡೀ ಸಮಾಜವೇ ಪುರುಷಮುಖೀ ಚಲನೆಯನ್ನು ಹೊಂದಿತ್ತು. ಚಕ್ರವರ್ತಿಯಿಂದ ಹಿಡಿದು ಸಾಮಾನ್ಯನವರೆಗೂ ಪುರುಷ ಪ್ರಾಬಲ್ಯವೇ ಪ್ರಧಾನವಾಗಿತ್ತು. ಸ್ತ್ರೀ ಸ್ವಾತಂತ್ರ್ಯದ ಅಗತ್ಯವನ್ನರಿತು ಅವರ ಜೀವನ ಕ್ರಮದ ಸುಧಾರಣೆಗೆ ಪ್ರಯತ್ನಿಸಿದವರು ತುಂಬಾ ಕಡಿಮೆ. ಧಾರ್ಮಿಕವಾಗಿ, ಸಾಮಾಜಿಕವಾಗಿ, ಶೈಕ್ಷಣಿಕವಾಗಿ, ರಾಜಕೀಯವಾಗಿ ಸ್ತ್ರೀಯರನ್ನು ಕಡೆಗಣಿಸಿದ್ದು ಮಧ್ಯಯುಗ ಸಾಧನೆ! ಎಂದರೆ ತಪ್ಪಾಗಲಾರದು. ಬ್ರಿಟಿಷ್ ಸಂಸ್ಕೃತಿ ಭಾರತೀಯರ ಮೇಲೆ ಪ್ರಭಾವ ಬೀರುವ ಪೂರ್ವದಲ್ಲಿ ಹೆಣ್ಣನ್ನು ಹೀನಾಯವಾಗಿ ನಡೆಸಿಕೊಂಡಿರುವುದು ಸ್ಪಷ್ಟವಾಗುತ್ತದೆ. ಮಹಿಳೆಯ ಪಾಲಿಗೆ ಇದೊಂದು ಕತ್ತಲೆಯ ಜಗತ್ತಾಗಿತ್ತು.

## ಸ್ವಾತಂತ್ರ್ಯಪೂರ್ವದಲ್ಲಿ ಮಹಿಳಾ ಹಕ್ಕುಗಳು

ಬ್ರಿಟಿಷ್ ಆಳ್ವಿಕೆಯ ಅವಧಿಯಲ್ಲಿ ಭಾರತೀಯ ಮಹಿಳೆಯರ ಸ್ಥಾನಮಾನ, ಆರ್ಥಿಕ ಮತ್ತು ಸಾಮಾಜಿಕ ಸಂರಚನೆಗಳಲ್ಲಿ ಗಣನೀಯವಾದ ಸುಧಾರಣೆಗಳಾದವು. ಶತಮಾನಗಳುದ್ದಕ್ಕೂ ಅವರು ಅನುಭವಿಸುತ್ತಾ ಬಂದಿದ್ದ ಯಾತನೆಯ ನಿವಾರಣೆಗಾಗಿ ಪ್ರಯತ್ನಗಳು ನಡೆದವು. ಪಾಶ್ಚಾತ್ಯರ ಉದಾರ ತತ್ವಗಳು, ಜೀವನ ಮತ್ತು ಅದರ ಸಮಸ್ಯೆಗಳ ಕುರಿತಾದ ವೈಚಾರಿಕ ದೃಷ್ಟ ಮಾತನಾಡುವ ಟೀಕೆ, ವಿಮರ್ಶೆ ಮಾಡುವ ಸ್ವಾತಂತ್ರ್ಯ ಸ್ವೀಕೃತ ತತ್ವಗಳನ್ನು ಮತ್ತು ಒಪ್ಪಿತ ಅಧಿಕಾರವನ್ನು ಪ್ರಶ್ನಿಸುವ ಹಕ್ಕು, ಸಾಮಾಜಿಕ ಸ್ಥಾನಮಾನವು ದೈವದತ್ತವಾದದ್ದು ಮತ್ತು ಅಪರಿವರ್ತನೀಯವಾದುದ್ದು ಎಂಬ ನಂಬಿಕೆಯ ನಿವಾರಣೆ, ವ್ಯಕ್ತಿಯು ಕರ್ತವ್ಯಗಳ ಜೊತೆಗೆ ಆತನ ಹಕ್ಕುಗಳಿಗೂ ಸಮಾನ ಮಾನ್ಯತೆ ನೀಡುವ ನಿಲುವು, ಇವೆಲ್ಲವೂ ಭಾರತೀಯರ ಮಹಿಳೆಯರ ಬಗೆಗೆ ಹೊಂದಿದ್ದ ಧೋರಣೆಯನ್ನು ಬದಲಿಸಿಕೊಳ್ಳಲು ಕಾರಣವಾದವು.

ಈ ದಿಸೆಯಲ್ಲಿ ಭಾರತೀಯ ಮಹಿಳೆಯರ ಸಮಸ್ಯೆಗಳ ನಿವಾರಣೆಗಾಗಿ ಹೋರಾಡಿದ ನೇತಾರರಲ್ಲಿ ಬಂಗಾಳದ 'ರಾಜಾರಾಂ ಮೋಹನ್‌ರಾಯ್' ಮೊದಲಿಗರು. ಇವರು ಮಧ್ಯಯುಗದಲ್ಲಿ ಪ್ರಬಲವಾಗಿದ್ದ ಸತಿ ಸಹಗಮನ ವ್ಯವಸ್ಥೆಯನ್ನು ಕೊನೆಗಾಣಿಸುವುದರಲ್ಲಿ ಮಹತ್ವದ ಪಾತ್ರವಹಿಸಿ, ಆ ನಿಟ್ಟಿನಲ್ಲೇ ಬಾಲ್ಯವಿವಾಹ ಮತ್ತು ಪರದಾ ವ್ಯವಸ್ಥೆಗಳ ವಿರುದ್ಧ ದನಿ ಎತ್ತಿದರು ಮತ್ತು ಮಹಿಳೆಯ ಪಿತ್ರಾರ್ಜಿತ ಹಕ್ಕಿಗಾಗಿ ಹೋರಾಡಿದರು. ಭಾರತದ ಪ್ರಾಚೀನ ಧರ್ಮಗ್ರಂಥಗಳಲ್ಲಿ ಸತಿ ಆಚರಣೆಗೆ ಯಾವುದೇ ಸಮರ್ಥನೆಯಿಲ್ಲವೆಂದು ತಿಳಿಸಿ ಈ ಅಮಾನುಷ ಆಚರಣೆಯನ್ನು ಬಲವಾಗಿ ಖಂಡಿಸಿದರು. ಇದರ ಪರಿಣಾಮವಾಗಿ ಆಕೆಯ ಕೆಲವು ಸಾಮಾಜಿಕ ಹಕ್ಕುಗಳನ್ನು ದಕ್ಕಿಸುವ ಸಲುವಾಗಿ ಅಂದಿನ ಬ್ರಿಟಿಷ್ ಸರ್ಕಾರ ಕೆಲವು ಕಾಯಿದೆಗಳನ್ನು ಹೊರಡಿಸುವುದರ ಮೂಲಕ ಸಾಧನೆಯನ್ನು ಮೆರೆಯಿತು. ಅವುಗಳ ಮೂಲಕ ಸ್ತ್ರೀಗೆ ಅವಳದೇ ಆದ ಕೆಲವು ಹಕ್ಕು ಸ್ವಾತಂತ್ರ್ಯವನ್ನು ಹೊಂದಲು ಸುಲಭವಾಯಿತು. ಅವುಗಳೆಂದರೆ,

## 1829 ಸತಿ ನಿರ್ಮೂಲನಾ ಕಾಯಿದೆ :-

ಅಂದಿನ ಬ್ರಿಟಿಷ್ ಗೌವರ್ನರ್ ಜನರಲ್ ಆಗಿದ್ದ 'ಲಾರ್ಡ್ ವಿಲಿಯಂ ಬೆಂಟಿಂಕ್'ನು 4 ಡಿಸೆಂಬರ್ 1829ರಂದು ಪ್ರಸಿದ್ಧವಾದ ಸತಿ ನಿರ್ಮೂಲನಾ ಕಾಯಿದೆಯೊಂದನ್ನು ಹೊರತಂದನು. ಪಾತಿವ್ರತ್ಯದ ಆದರ್ಶವನ್ನು ವೈಭವೀಕರಿಸುವ ದಿಸೆಯಲ್ಲಿ ಸತಿಸಹಗಮನ ಪದ್ಧತಿಯಂತಹ ಅಮಾನವೀಯ ಆಚರಣೆಗೆ ಅವಕಾಶ ಮಾಡಿಕೊಟ್ಟಿತು. ತಮ್ಮ ಗಂಡಂದಿರ ಮರಣಾನಂತರ ಅವರ ಮೃತ ಶರೀರಗಳೊಂದಿಗೆ ಸಾಯುವಂತೆ ವಿಧವೆಯರನ್ನು ಪದೇ ಪದೇ ಬಲವಂತಗೊಳಿಸಲಾಗುತ್ತಿತ್ತು. ಕೆಲವೊಮ್ಮೆ ವಿಧವೆಯಾದ ಮಹಿಳೆಯನ್ನು ಆಕೆಗೆ ಇಷ್ಟವಿಲ್ಲದಿದ್ದರೂ ಒತ್ತಾಯಪೂರ್ವಕವಾಗಿ ಗಂಡನ ಜೊತೆಗೆ ನೂಕುತ್ತಿದ್ದರು. ಇನ್ನೂ ಕೆಲವೊಮ್ಮೆ ಆಕೆ ಕೈಕಾಲುಗಳನ್ನು ಕಟ್ಟಿ ಹಾಕಿ ಚಿತೆಯ ಮೇಲೆ ಇಡುತ್ತಿದ್ದರು. ಇಂತಹ ಕ್ರೂರತನದ ಮಹಿಳಾ ಸಮಸ್ಯೆಯನ್ನು ಕೈಗೆತ್ತಿಕೊಂಡ ಬ್ರಹ್ಮ ಸಮಾಜದ ಸುಧಾರಕರಾದ ರಾಜಾರಾಂ ಮೋಹನ್‌ರಾಯ್‌ರವರು ಬ್ರಿಟಿಷ್ ಸರ್ಕಾರಕ್ಕೆ ಈ ಸತಿ ಆಚರಣೆಯನ್ನು ನಿಷೇಧಗೊಳಿಸುವ ಕಾಯಿದೆಯನ್ನು ತರಬೇಕೆಂದು ಒತ್ತಾಹಿಸಿದರು. ಅದರ ಪರಿಣಾಮವಾಗಿ ಆಗಿನ ಭಾರತದ ಬ್ರಿಟಿಷ್ ಗವರ್ನರ್ ಆಗಿದ್ದ ಲಾರ್ಡ್ ಬೆಂಟಿಂಕನು 1829ರಲ್ಲಿ ಸತಿ ನಿರ್ಮೂಲನಾ ಕಾಯಿದೆಯನ್ನು ಹೊರಡಿಸಿದನು. ಈ ಕಾಯಿದೆಯ ನಿಯಮವೆಂದರೆ,

(ಅ) ವಿಧವೆಯರನ್ನು ಜೀವಂತವಾಗಿ ಸುಡುವುದು ಅಥವಾ ಸಮಾಧಿ ಮಾಡುವುದು ಶಿಕ್ಷಾರ್ಹ ಅಪರಾಧವೆಂದು ಪರಿಗಣಿಸುವುದು.

(ಆ) ಈ ರೀತಿಯಾದರೂ ಅಪರಾಧ ಎಸಗಿದರೆ ಶಿಕ್ಷೆ ಅಥವಾ ಜುಲ್ಮಾನೆ ಅಥವಾ ಎರಡನ್ನೂ ವಿಧಿಸುತ್ತದೆ ಎಂದು ತಿಳಿಸಲಾಯಿತು.

ಇದರ ಪರಿಣಾಮವಾಗಿ ವಿಧವೆಯರಾದ ಮಹಿಳೆಯರು ಸಮಾಜದಲ್ಲಿ ಬದುಕುವ ಹಕ್ಕನ್ನು ಪಡೆದಂತಾಯಿತು.

ನಂತರ ವಿಧವಾ ಪುನರ್ ವಿವಾಹ ಹಕ್ಕನ್ನು ಅಂಗೀಕರಿಸಿ ಮನ್ನಣೆ ನೀಡಿದ್ದು, ಸತಿ ನಿಷೇಧ ಕಾಯ್ದೆಯಿಂದ ಬಂದ ಸಹಜ ಫಲ. ಈ ಕಾಲದಲ್ಲಿನ ವಿಧವೆಯರ ಸಮಸ್ಯೆಗಳ ನಿವಾರಣೆಗೆ ಹೋರಾಡಿದ ಪ್ರಮುಖರೆಂದರೆ ಬಂಗಾಳದ 'ಈಶ್ವರಚಂದ ವಿದ್ಯಾಸಾಗರ್' ಇವರು ವಿಧವೆಯರ ಪುನರ್ ವಿವಾಹ ಹಕ್ಕಿಗಾಗಿ ಚಳುವಳಿಯನ್ನು ಆರಂಭಿಸಿದರು ಮತ್ತು ಮಹಿಳೆಯರ ಶಿಕ್ಷಣಕ್ಕಾಗಿಯೂ ಶ್ರಮಿಸಿದರು. ವಿಧವೆಯರಿಗೆ ಮರುವಿವಾಹಕ್ಕೆ ಅವಕಾಶವೀಯಲು ಕಾಯಿದೆಯೊಂದನ್ನು ರಚಿಸಬೇಕೆಂದು 'ವಿದ್ಯಾಸಾಗರ್'ರು ಬ್ರಿಟಿಷ್ ಸರ್ಕಾರದ ಮೇಲೆ ಬಲವಾದ ಒತ್ತಡವನ್ನು ತಂದು ತಮ್ಮ ವಾದಕ್ಕೆ ವಿಚಾರವಾದಿಗಳ ಬೆಂಬಲವು ಇದೆ ಎಂದು ಹೇಳಿ ಅವರುಗಳ ಸಹಿ ಇರುವ ಮನವಿ ಪತ್ರವೊಂದನ್ನು ಸಲ್ಲಿಸುವುದರ ಮೂಲಕ ತೋರಿಸಿಕೊಟ್ಟರು. ಈ ಮನವಿಯನ್ನು ತಿರಸ್ಕರಿಸಿ ಯಥಾಸ್ಥಿತಿಯು ಇರಬೇಕೆಂದು ಸಾಂಪ್ರದಾಯವಾದಿಗಳೂ ಸಹ ಪ್ರತಿ ಮನವಿಯನ್ನು ಬೃಹತ್ ಸಂಖ್ಯೆಯ ಜನರ ಬೆಂಬಲದಿಂದ ಬ್ರಿಟಿಷ್ ಸರ್ಕಾರಕ್ಕೆ ಸಲ್ಲಿಸಿದ್ದರು. ಆದರೆ ಬ್ರಿಟಿಷ್ ಸರ್ಕಾರ ಅದನ್ನು ಮಾನ್ಯ ಮಾಡದೆ 1856 ಜುಲೈ 25ರಂದು ವಿಧವಾ ಪುನರ್ ವಿವಾಹ ಕಾಯಿದೆಗೆ ಅಂಗೀಕಾರ ನೀಡಿತು.

## 1856 ಹಿಂದೂ ವಿಧವಾ ಪುನರ್ ವಿವಾಹ ಕಾಯಿದೆ :-

ಈ ಕಾಯಿದೆಯು ಹಿಂದೂ ವಿಧವೆಯರ ಮರುವಿವಾಹಕ್ಕೆ ಇದ್ದ ಎಲ್ಲ ಕಾನೂನಿನ ಅಡೆತಡೆಗಳನ್ನು ನಿವಾರಿಸಿತು. ಇದರ ಉದ್ದೇಶವು ಉತ್ತಮ ನೈತಿಕ ಮೌಲ್ಯಗಳನ್ನು ಮತ್ತು ಸಾರ್ವಜನಿಕ ಕಲ್ಯಾಣವನ್ನು ಪ್ರೋತ್ಸಾಹಿಸುವುದಾಗಿತ್ತು. ಈ ಕಾಯಿದೆಯ ನಿಯಮಗಳೆಂದರೆ,

(1) ಗಂಡ ಸತ್ತ ವಿಧವೆಯು ಮರುವಿವಾಹವಾಗುವುದು ಸಿಂಧುವಾಗಿದೆ.

(2) ಇಂತಹ ವಿವಾಹ ಅನೈತಿಕವಲ್ಲ ಹಾಗೂ ಈ ರೀತಿಯ ವಿವಾಹದಿಂದ ಹುಟ್ಟುವ ಮಕ್ಕಳನ್ನು ಕಾನೂನು ಸಮ್ಮತವೆಂದು ಸಾರಿತು.

(3) ವಿಧವೆಯು ಪುನರ್ ವಿವಾಹ ಮಾಡಿಕೊಂಡ ನಂತರ ಮೃತ ಪತಿಯ ಆಸ್ತಿಯ ಮೇಲೆ ಯಾವುದೇ ಹಕ್ಕನ್ನು ಹೊಂದುವಂತಿಲ್ಲ.

(4) ಬದಲಾಗಿ ಪುನರ್ ವಿವಾಹದ ನಂತರ ವಿಧವೆಯು ವಿವಾಹಿತ ವ್ಯಕ್ತಿಯ ಎಲ್ಲಾ ರೀತಿಯ ಆಸ್ತಿಗೆ ಹಕ್ಕುಗಳಿಗೆ ಅರ್ಹಳಾಗುತ್ತಾಳೆ.

(5) ಪ್ರಾಪ್ತ ವಯಸ್ಕಲ್ಲದ ವಿಧವೆಯ ಪುನರ್ ವಿವಾಹ ಪ್ರಕರಣದಲ್ಲಿ ವಿವಾಹಕ್ಕೆ ಮುನ್ನ ಆಕೆಯ ತಂದೆ, ತಾಯಿ, ಅಜ್ಜ, ಹಿರಿಯ, ಸಹೋದರ ಅಥವಾ ಹತ್ತಿರದ ಪುರುಷ ಸಂಬಂಧಿಯ ಅನುಮತಿ ಅಗತ್ಯ.

(6) ಅಂತಹ ಅನುಮತಿ ಇಲ್ಲದ ವಿವಾಹ ಅನೂರ್ಜಿತ ಹಾಗೊಮ್ಮೆ ವಿವಾಹವಾದರೂ ಅದನ್ನು ಅನೂರ್ಜಿತವೆಂದು ಘೋಷಿಸುಲಾಗುವುದಿಲ್ಲ.

ಹೀಗೆ ಈ ಕಾಯಿದೆ ಮಹಿಳೆಯ ಬದುಕಿನ ದಾರಿದೀಪವಾಯಿತು. ಆಕೆ ವಿವಾಹಕ್ಕೆ ಸಂಬಂಧಿಸಿದಂತೆ ತಕ್ಕಮಟ್ಟಿನ ಹಕ್ಕನ್ನು ಹೊಂದುವಂತಾಯಿತು. ಆದರೆ ಇದಕ್ಕೆ ಸಿಕ್ಕ ಪ್ರತಿಕ್ರಿಯೆ ಅಷ್ಟೊಂದು ಪ್ರೋತ್ಸಾಹದಾಯಕವಾಗಿರಲಿಲ್ಲ. ಆರ್ಯ ಸಮಾಜ ಮತ್ತು ಬ್ರಹ್ಮ ಸಮಾಜಗಳು ವಿಧವಾ ಪುನರ್ ವಿವಾಹ ವೇದಿಕೆಗಳನ್ನು ಮಾಡಿಕೊಂಡು ಈ ಬಗ್ಗೆ ಪ್ರಯತ್ನಿಸಿದರೂ ಸಿಕ್ಕಿದ ಬೆಂಬಲ ಮಾತ್ರ ನಗಣ್ಯವಾಗಿತ್ತು. ವಿಧವಾ ವಿವಾಹದ ಪ್ರಕರಣಗಳು ಕಡಿಮೆಯಿರಬಹುದಾದರೂ ಈ ಕಾಯಿದೆಯಿಂದಾಗಿ ವಿಧವೆಯರನ್ನು ಗೋಳು ಹುಯ್ದುಕೊಳ್ಳುವ, ಅವಮಾನಪಡಿಸುವ, ಹಿಂಸೆ, ಕ್ರೌರ್ಯ, ಶೋಷಣೆಗೆ ಒಳಪಡಿಸುವ ಪ್ರವೃತ್ತಿಗೆ ಒಂದು ಬಲವಾದ ಕಡಿವಾಣ ಹಾಕುವುದು ಸಾಧ್ಯವಾಯಿತು.

ಇವುಗಳ ಪ್ರೇರಣೆಯಿಂದ ಮತ್ತೊಂದು ಶೋಷಣೆಯ ವಿರುದ್ಧದ ಪರಿಹಾರದ ಹಕ್ಕನ್ನು ಪಡೆದಳು. ಈ ಕಾಲದಲ್ಲಿ ಮಹಿಳೆಯರ ವಿಮೋಚನೆಗಾಗಿ ಕೊಡುಗೆ ನೀಡಿದ ವಿಶೇಷ ಮಹತ್ವವನ್ನು ಸಾರುವ ಕಾಯಿದೆಗಳಲ್ಲಿ ಅತ್ಯಂತ ಪ್ರಮುಖವಾದಂತಹ ಕಾಯಿದೆಯೆಂದರೆ ಬಾಲ್ಯವಿವಾಹ ನಿಷೇಧ ಕಾಯಿದೆ. ಈ ಬಗೆಗಿನ ವಿವಾದವನ್ನು ಪರಿಹರಿಸಲು ರಚಿಸಲಾಗಿದ್ದ ಸರ್ಕಾರಿ ಸಮಿತಿಯ ಪರವಾಗಿ 'ರಾವ್‌ಬಹದ್ದೂರ್ ಹಂಬಿಲಾಸ್ ಶರ್ದಾ' ಎಂಬುವವರು ಕೇಂದ್ರೀಯ

ಶಾಸಕಾಂಗ ಸಭೆಯಲ್ಲಿ ಈ ಮಸೂದೆಯನ್ನು 1929ರಲ್ಲಿ ಮಂಡಿಸಿ ಅದು ಶಾಸನವಾಗುವಂತೆ ಒತ್ತಾಯ ಮಾಡಿದರ ಪರಿಣಾಮವಾಗಿ, 'ಶರ್ದಾ ಕಾಯಿದೆ' ಎಂದೇ ಜನಪ್ರಿಯವಾಯಿತು.

## 1929 ಬಾಲ್ಯವಿವಾಹ ನಿಷೇಧ ಕಾಯಿದೆ

ಇದು ಏಪ್ರಿಲ್ 1, 1929ರಂದು ಜಾರಿಗೆ ಬಂದಿತು. ಮಕ್ಕಳ ವಿವಾಹವು ಅನೂರ್ಜಿತ ಎಂದು ಘೋಷಿತವಾಗದಿದ್ದರೂ ಸಹ ಈ ಕಾಯಿದೆಯು ಬಾಲ್ಯವಿವಾಹವನ್ನು ನಿಷೇಧಿಸುತ್ತದೆ. ಈ ಕಾಯಿದೆಯ ನಿಯಮಾವಳಿಗಳೆಂದರೆ,

(1) 18 ವರ್ಷದ ಕೆಳಗಿನ ಹುಡುಗರ ಮತ್ತು 14 ವರ್ಷದ ಕೆಳಗಿನ ಹುಡುಗಿಯರ ವಿವಾಹಕ್ಕೆ ಒಪ್ಪಂದ ಮಾಡಿಕೊಳ್ಳುವುದು.

(2) ವಿವಾಹಕ್ಕೆ ಸಿದ್ಧತೆ ನಡೆಸುವುದು ಹಾಗೂ ವಿವಾಹದ ಅನುಕೂಲತೆಗಳನ್ನು ಕಲ್ಪಿಸಿಕೊಡುವುದು ಅಪರಾಧ.

(ಅನಂತರ ಹುಡುಗಿಯರ ವಿವಾಹ ವಯಸ್ಸನ್ನು 15 ವರ್ಷಗಳಿಗೆ ಏರಿಸಲಾಯಿತು. 1978ರಲ್ಲಿ ಮಾಡಲಾದ ತಿದ್ದುಪಡಿಯು ಹುಡುಗರ ವಿವಾಹ ವಯಸ್ಸನ್ನು 21 ವರ್ಷಗಳಿಗೂ ಮತ್ತು ಹುಡುಗಿಯರ ವಿವಾಹ ವಯಸ್ಸನ್ನು 18 ವರ್ಷಗಳಿಗೂ ಪುರ್ನ ಏರಿಸಿತು)

(3) ಈ ಕಾಯಿದೆಯು ಉಲ್ಲಂಘನೆಯಾದಲ್ಲಿ ಅದಕ್ಕೆ ಕಾರಣರಾಧ ನವವಿವಾಹಿತನಾಗಿದ್ದು, ವಯಸ್ಕನಾಗಿರದ ಗಂಡ, ನವ ಬಾಲದಂಪತಿಗಳ ಹೆತ್ತವರು, ವಿವಾಹ ನಡೆಸಿಕೊಟ್ಟ ಪುರೋಹಿತರು ಎಲ್ಲರೂ ಮೂರು ತಿಂಗಳ ಸಾಧಾರಣ ಜೈಲು ವಾಸ ಅಥವಾ 100 ರೂ.ಗಳ ವರೆಗೆ ದಂಡ ಅಥವಾ ಇವರಡರನ್ನೂ ಸ್ವೀಕರಿಸಬೇಕಾದ ಶಿಕ್ಷೆಗೆ ಒಳಗಾಗಬೇಕಾಗುತ್ತದೆ.

ಈ ರೀಗೆ ಕಾಯಿದೆಯ ಉಲ್ಲಂಘನೆಗೆ ದಂಡವನ್ನು ವಿಧಿಸಿದೆಯಾದರೂ ಕೆಲವೊಮ್ಮೆ ವಿವಾಹ ನಡೆದು ಹೋಗಿದ್ದಲ್ಲಿ ಅದು ಸಿಂಧುವಾಗಿಯೇ ಉಳಿಯುತ್ತದೆ. ಮಹಿಳೆಯ ಈ ಕಾಯಿದೆಯಡಿಯಲ್ಲಿ ಶಿಕ್ಷೆಗೆ ಒಳಗಾಗುವುದಿಲ್ಲ. ಈ ಕಾಯಿದೆಯು ಬಾಲ್ಯವಿವಾಹವನ್ನು ನಿಷೇಧಿಸಲು ಅದನ್ನು ನಿಲ್ಲಿಸುವ ತಡೆಯಾಜ್ಞೆಯನ್ನು ಹೊರಡಿಸಲು ಅವಕಾಶ ಕಲ್ಪಿಸುತ್ತದೆ. ಆದರೆ ಆರೋಪಿತವಾದ ವಿವಾಹ ನಡೆದು ಒಂದು ವರ್ಷಕ್ಕಿಂತ ಹೆಚ್ಚು ಕಾಲವಾಗಿದ್ದರೆ ಆಗ ಯಾವುದೇ ಕ್ರಮವನ್ನು ತೆಗೆದುಕೊಳ್ಳುವಂತಿಲ್ಲ. ಈ ಕಾಯಿದೆ ಒಂದು ರೀತಿ ಆಕೆ ಹಕ್ಕನ್ನು ಕೊಟ್ಟು ಮೊಟಕುಗೊಳಿಸಿದ ಹಾಗಿ. ಒಟ್ಟಾರೆ ಬ್ರಿಟಿಷರು ಭಾರತವನ್ನು ಬಿಟ್ಟು ಹೊರಡುವ ಸಮಯಕ್ಕೆ ಬಾಲ್ಯವಿವಾಹ ಪ್ರಕರಣಗಳು ಸಾಕಷ್ಟು ಕಡಿಮೆಯಾಗಿದ್ದವು.

1927ರಲ್ಲಿ ಮದ್ರಾಸಿನ ಶಾಸನ ಸಭೆಯಲ್ಲಿ ಕಾನೂನಾಗಿ ಮಂಜೂರಾದ ದೇವಾಲಯಗಳಲ್ಲಿ ಕೂಲಿ ನೀಡಿ ದೇವದಾಸಿಯರನ್ನು ನೇಮಿಸಿಡುವ ಪದ್ಧತಿಯನ್ನು ನಿಷೇಧಿಸಿದ 'ಮುತ್ತುಲಕ್ಷ್ಮಿರೆಡಿ' ಮಸೂದೆ, 10 ವರ್ಷಗಳ ನಂತರ ಜಾರಿಗೆ ತರಲಾದ ದೇವಾಲಯಗಳಿಗೆ ಮಕ್ಕಳನ್ನು ಅರ್ಪಿಸುವ ಪದ್ಧತಿಯನ್ನು ನಿಷೇಧಿಸಿದ ಒಂದು ಕಾನೂನಿನ ಮಸೂದೆಯಾಗಿತ್ತು.

ಆಸ್ತಿಯ ಹಕ್ಕಿನ ಸಂಬಂಧ, ಪತಿಯಾದವಳಿಕೆ ತನ್ನ ಜೀವಿತ ಕಾಲದಲ್ಲಿ ದಾಯಾದ್ಯದ ಆಸ್ತಿಯಲ್ಲಿ ತನ್ನ ಪತಿಗಿದ್ದ ಪಾಲನ್ನು ಪಡೆದು ಅನುಭವಿಸುವ ಹಕ್ಕನ್ನು ನೀಡಿದ್ದರೂ ಅದರ ಸರ್ವತ್ರ ಸ್ವಾತಂತ್ರವನ್ನು ಹೊಂದುವ ಅಂದರೆ ಪರಭಾರೆ ಮಾಡುವ ಅಧಿಕಾರನ್ನು ಕೊಡದಿದ್ದರಿಂದ ಈ ಆಸ್ತಿಯ ಹಕ್ಕಿಗೆ ಸಂಬಂಧಿಸಿದಂತೆ ಮಹಿಳಾಪರ ಕಾನೂನನ್ನು ಜಾರಿಗೊಳಿಸಲಾಯಿತು. ಅದೇ ಹಿಂದೂ ಮಹಿಳೆಯರ ಆಸ್ತಿ ಹಕ್ಕು ಕಾಯಿದೆ.

## 1937ರ ಹಿಂದೂ ಮಹಿಳೆಯರ ಆಸ್ತಿ ಹಕ್ಕು ಕಾಯಿದೆ :-

ಬಾಲ್ಯವಿವಾಹ ನಿಷೇಧ ಕಾಯಿದೆಯ ನಂತರ ಈ ದಿಕ್ಕಿನಲ್ಲಿ ಮುಂದಿನ ಕಾನೂನು ಹೆಜ್ಜೆ ಗುರುತಾದದ್ದು, ಎಂದರೆ 1937ರ ಹಿಂದೂ ಮಹಿಳೆಯರ ಆಸ್ತಿ ಹಕ್ಕಿನ ಕಾಯಿದೆ – ಈ ಕಾಯಿದೆಯು ಮಹಿಳೆಗೆ ತನ್ನ ಮೃತ ಗಂಡನ ಆಸ್ತಿಯಲ್ಲಿ ಮಗನಿಗೆ ಸಮಾನವಾಗಿ ಆಸ್ತಿಯಲ್ಲಿ ಪಾಲು ಪಡೆಯಲು ಅವಕಾಶ ಮಾಡಿಕೊಡುತ್ತದೆ. ಆಸ್ತಿಯು ತನ್ನ ಗಂಡನ ಮರಣಧ ಸಂದರ್ಭದಲ್ಲಿ ಅವಿಭಾಜ್ಯವಾಗಿದ್ದರೆ ಮತ್ತು ಪ್ರತ್ಯೇಕವಾಗಿರದಿದ್ದರೆ ಮಹಿಳೆಯು ತನ್ನ ಗಂಡನ ಪಾಲಿನ ಆಸ್ತಿಯನ್ನು ಅನುಭೋಗಿಸುವ ಅವಕಾಶವನ್ನು ಹೊಂದಿರುತ್ತಾಳೆ.

ಈ ಅವಧಿಯಲ್ಲಿ ಮಹಿಳೆಯರು ಚುನಾವಣಾ ಹಕ್ಕುಗಳನ್ನು ಪಡೆಯುವುದಕ್ಕಾಗಿ ಚಳುವಳಿಯನ್ನು ನಡೆಸಲಾರಂಭಿಸಿದರು. 1918ರ ಡಿಸೆಂಬರ್‌ನಲ್ಲಿ ದೆಹಲಿಯಲ್ಲಿ ನಡೆದ 32ನೇ ನ್ಯಾಷನಲ್ ಕಾಂಗ್ರೆಸ್‌ನ ಸಮಾವೇಶದಲ್ಲಿ ಸರಳಾದೇವಿ ಚೌಧರಾಣಿಯವರು ಮಹಿಳೆಯರಿಗೆ ಮತಾಧಿಕಾರದ ಹಕ್ಕನ್ನು ನೀಡಬೇಕೆಬ ಬೇಡಿಕೆಯನ್ನಿಟ್ಟರು. ಅದೇ ವರ್ಷ 1918ರ ಆಗಸ್ಟ್‌ನಲ್ಲಿಯೇ ಮುಂಬೈನಲ್ಲಿ ನಡೆದ ವಿಶೇಷ ಕಾಂಗ್ರೆಸ್ ಅಧಿವೇಶನದಲ್ಲಿಯೂ ಸಹ, 'ಸರೋಜಿನಿ ನಾಯ್ಡು' ಅವರು ಮಹಿಳೆಯರ ನೋವು , ಸಮಸ್ಯೆಗಳು ಹಾಗೂ ಹೆಂಗಸರಿಗೆ ಬೇಕಾಗಿರುವ ರಾಜಕೀಯ ಪ್ರಜ್ಞೆ, ಅವರಿಗೆ ಸಲ್ಲಬೇಕಾದ ಮಾನವ ಹಕ್ಕುಗಳ ಸೌಲಭ್ಯ, ಮತಾಧಿಕಾರದ ಹಕ್ಕನ್ನು ಕುರಿತು ತಮ್ಮ ಬೇಡಿಕೆಯನ್ನು ಸಲ್ಲಿಸಿದರು.

ರಾಷ್ಟ್ರೀಯ ಪ್ರಜ್ಞೆ ಬಿತ್ತಲು, ರಾಷ್ಟ್ರೀಯ ಬದುಕಿನ ಆದರ್ಶಗಳನ್ನು ಅಳವಡಿಸಿಕೊಳ್ಳಲು ಸೂಕ್ತವಾದ ತಳಪಾಯ ಹಾಕಲು ಮತಾಧಿಕಾರದ ಹಕ್ಕುಗಳಿಗೆ ತಮ್ಮ ಬೇಡಿಕೆ ಇದೆಯೇ ಹೊರತು ಪುರುಷರ ದಿನನಿತ್ಯದ ವ್ಯವಹಾರಗಳಲ್ಲಾಗಲೀ ತಲೆ ಹಾಕಲಾಗಲಿ, ಅಡ್ಡಗಾಲು ಹಾಕಲಾಗಲಿ ಅಲ್ಲ ಎಂದು ಸರೋಜಿನಿ ನಾಯ್ಡು ಸ್ಪಷ್ಟಪಡಿಸಿದರು.

ಹುಟ್ಟಿದ ವ್ಯಕ್ತಿ ಹೆಣ್ಣಾಗಲಿ, ಗಂಡಾಗಲಿ ಮತದಾನ ಮಾಡುವ ಹಕ್ಕುಂಟು. ಪ್ರಕೃತಿ ಸಹಜವಾದ ಜೈವಿಕ ಲಿಂಗಗಳನ್ನು ಮುಂದಿಟ್ಟುಕೊಂಡು ಹೆಣ್ಣು-ಗಂಡುಗಳ ನಡುವೆ ತಾರತಮ್ಯವನ್ನು ಸೃಷ್ಟಿಸುತ್ತಾ, ಒಬ್ಬರಿಗೆ ಹಕ್ಕನ್ನು ನೀಡಿ, ಮತ್ತೊಬ್ಬರಿಗೆ ಅದೇ ಮತದಾನದ ಹಕ್ಕನ್ನು ನಿರಾಕರಿಸುವುದನ್ನು ಹೆಲೆನ್‌ಟೇಲರ್ ಪ್ರಶ್ನಿಸುತ್ತಾಳೆ. ಆಕೆ ಮತದಾನದ ಹಕ್ಕಿನೊಂದಿಗೆ ಆಸ್ತಿ ಹಕ್ಕು ಕೂಡ ಜನ್ಮಜಾತವಾದದ್ದು ಎಂದು ವಾದಿಸುತ್ತಾಳೆ. ಈಕೆಯ ಪ್ರಕಾರ ಆಸ್ತಿ ಹಾಗೂ ಅದರೊಂದಿಗಿನ ಹಕ್ಕು ಮತ್ತು ಕರ್ತವ್ಯಗಳಿಗೆ ರಾಜಕೀಯ ಆಯಾಮವಿದ್ದು, ಹೆಣ್ಣು ತನಗೆ ರಾಜಕೀಯದಲ್ಲಿ ಆಸಕ್ತಿಯಿಲ್ಲವೆಂದು ರಾಜಕೀಯವನ್ನು ನಿರಾಕರಿಸಿದರೂ ವ್ಯಕ್ತಿಯ ಹಕ್ಕನ್ನು ಪ್ರತಿನಿಧಿಸುವ ಆಸ್ತಿ. ಅದು ವ್ಯಕ್ತಿಯ ವ್ಯಕ್ತಿತ್ವದ ಒಳಗೆ ಇರುವಂತಹ ರಾಜಕೀಯ ಘಟಕ ಎಂದು ಸ್ಪಷ್ಟಪಡಿಸುತ್ತಾಳೆ.

ಪ್ರತಿಯೊಂದು ಸಮಾಜದಲ್ಲಿಯೂ ಈ ಮತದಾನದ ಹಕ್ಕು ವ್ಯಕ್ತಿಗೆ ಸ್ವಾಭಾವಿಕವಾಗಿಯೇ ಬರುವಂತಹದು. ಅದು ಜಾತಿ, ಮತ, ಧರ್ಮ, ಲಿಂಗಕ್ಕೆ ಸಂಬಂಧಪಟ್ಟಿದ್ದಲ್ಲ. ಹೆಣ್ಣು ತನ್ನ ಸ್ಥಿತಿಗತಿಗಳನ್ನು ಅರಿಯುವಂತಹ ತಿಳುವಳಿಕೆ, ಜ್ಞಾನ ಮೂಡಿಸುವ ಶಿಕ್ಷಣ ಅವಶ್ಯಕ. ಇವೆಲ್ಲವನ್ನು ಪಡೆಯುವ ಹಕ್ಕು ಹೆಣ್ಣಿಗೂ ಇದೆ. ಅದು ಅವಳ ಪಾಲಿಗೆ ದಕ್ಕಬೇಕು ಅಷ್ಟೆ. ಸಂವಿಧಾನವು ಮತದಾನದ ಹಕ್ಕನ್ನು ಸಮಾಜದ ಎಲ್ಲ ವ್ಯಕ್ತಿಗಳಿಗೂ ನೀಡಿದೆ. ಆದ್ದರಿಂದ ಮಹಿಳೆಯರಿಗೂ ಸಹ ಸಂವಿಧಾನಾತ್ಮಕ ನೆಲೆಯಲ್ಲಿ ಮತದಾನ ಮಾಡುವ ಹಕ್ಕು ಸ್ವಾಭಾವಿಕವಾಗಿರುತ್ತದೆ. ಇದೆಲ್ಲದರ ಹೋರಾಟದ, ಒತ್ತಾಯದ ಫಲವಾಗಿ ಮಹಿಳೆಯರಿಗೆ ಮತದಾನದ ಹಕ್ಕು ದೊರಕುವಂತಯಿತು. ಮಹಿಳೆಯರಿಗೆ ಮತದಾನದ ಹಕ್ಕನ್ನು ಕೊಟ್ಟ ಪ್ರಪ್ರಥಮ ರಾಜ್ಯವೇ ತಿರುವಾಂಕೂರ್. ನಂತರ ಇವರ ರಾಜ್ಯ, ರಾಷ್ಟಗಳಲ್ಲಿ ಸಹ ಇದರಂತೆಯೇ ಮಹಿಳೆಯರಿಗೆ ಮತದಾನದ ಹಕ್ಕನ್ನು ಕೊಡಲಾಯಿತು.

ನ್ಯೂಜಿಲ್ಯಾಂಡ್‌ನಲ್ಲಿ – 1893ರಲ್ಲಿ ಮಹಿಳೆಯರಿಗೆ ಮತದಾನದ ಹಕ್ಕನ್ನು ನೀಡಿತು.

| | |
|---|---|
| ರಷ್ಯಾ | – 1917 |
| ಬ್ರಿಟನ್ | – 1918 |
| ಅಮೇರಿಕಾ | – 1920 |
| ಭಾರತ | – 1930 |
| ಫ್ರಾನ್ಸ್ | – 1946 |
| ಚೈನಾ | – 1947 |

ಹೀಗೆ ಮಹಿಳೆಯರು ಮತದಾನ ಮಾಡುವ ಹಕ್ಕನ್ನು ಮಾತ್ರವಲ್ಲದೆ ಚುನಾವಣೆಗಳಲ್ಲಿ ಸ್ಪರ್ಧಿಸುವ ಹಾಗೂ ರಾಜ್ಯ ಪ್ರತಿನಿಧಿ ಸಭೆಗಳಿಗೆ ಚುನಾಯಿತ ಪ್ರತಿನಿಧಿಗಳಾಗಿ ಪ್ರವೇಶಿಸುವ ಹಕ್ಕುಗಳನ್ನು ಸಹ ಪಡೆದರು. ವಂಗ ಮಹಿಳಾ ಸಮಾಜ ಮತ್ತು ಲೇಡೀಸ್ ಥಿಯೋಸಾಫಿಕಲ್ ಸೊಸೈಟಿಯಂತಹ ಕೆಲವು ಮಹಿಳಾ ಸಂಘಟನೆಗಳು ಸ್ಥಳೀಯ ಮಟ್ಟಗಳಲ್ಲಿ ಆಧುನಿಕ ಮೌಲ್ಯಗಳನ್ನು ಉತ್ತೇಜಿಸಲು ಕಾರ್ಯನಿರ್ವಹಿಸಿದರೆ, ಇನ್ನೂ ಅನೇಕ ಸಂಘಟನೆಗಳು ರಾಷ್ಟ್ರೀಯ ಆಧಾರದ ಮೇಲೆ ಮಹತ್ವದ ಕಾರ್ಯನಿರ್ವಹಿಸಿದವು. ಅಂತಹ ಪ್ರಮುಖ ಐದು ರಾಷ್ಟ್ರೀಯ ಸಂಘಟನೆಗಳು ಮಹಿಳೆಯರ ವಿಮೋಚನೆಗಾಗಿ ಹೋರಾಟದ ಮುಖ್ಯ ಗುರಿ ಹೊಂದಿ, ಅಸ್ತಿತ್ವಕ್ಕೆ ಬಂದವು. ಅವುಗಳೆಂದರೆ –

(1) 1904ರಲ್ಲಿ ಆರಂಭಗೊಂಡ ಭಾರತ್ ಮಹಿಳಾ ಪರಿಷದ್

(2) 1910ರಲ್ಲಿ ಸ್ಥಾಪಿತವಾದ ಭಾರತ್‌ಸ್ತ್ರೀ ಮಹಾಮಂಡಲ

(3) 1917ರಲ್ಲಿ ಆ್ಯನಿಬೆಸೆಂಟ್ ಅವರು ಪ್ರಾರಂಭಿಸಿದ ಮಹಿಳೆಯರ ಭಾರತೀಯ ಸಂಘ

(4) 1925ರಲ್ಲಿ ಲೇಡಿ ಅಬರ್ಡಿನ್ ಮತ್ತು ಲೇಡಿ ಟಾಟಾರವರು ಸ್ಥಾಪಿಸಿದ ಭಾರತದ ಮಹಿಳೆಯರ ರಾಷ್ಟ್ರೀಯ ಕೌನ್ಸಿಲ್

(5) 1925ರಲ್ಲಿ ಮಾರ್ಗರೇಟ್ ಕಸಿನ್ಸ್ ಮತ್ತು ಇತರರ ಪ್ರಯತ್ನಗಳ ಮೂಲಕ ವ್ಯವಸ್ಥಾಪನೆಗೊಂಡ ಅಖಿಲ ಭಾರತದ ಮಹಿಳೆಯರ ಕಾನ್ಫರೆನ್ಸ್. ಅಲ್ಲದೆ ಕಸ್ತೂರಿಬಾ ಗಾಂಧಿಯವರ ಮರಣಾನಂತರ 'ಕಸ್ತೂರಿ ಬಾ ಗಾಂಧಿ ರಾಷ್ಟ್ರೀಯ ಸ್ಮಾರಕ ಟ್ರಸ್ಟ್' ಆರಂಭವಾಯಿತು.

ಈ ಸಂಘಟನೆಗಳಲ್ಲಿ ಕೈಗೆತ್ತಿಕೊಂಡ ವಿಚಾರಗಳೆಂದರೆ, ಮಹಿಳೆಯರ ಶಿಕ್ಷಣ, ಪರ್ದಾ ಮತ್ತು ಬಾಲ್ಯವಿವಾಹಗಳಂತಹ ಸಾಮಾಜಿಕ ಪಿಡುಗುಗಳ ನಿರ್ಮೂಲನೆ, ಹಿಂದೂ ಕಾನೂನು ಪುನರ್-ರಚನೆ, ಮಹಿಳೆಯರ ನೈತಿಕ ಮತ್ತು ಭೌತಿಕ ಪ್ರಗತಿ, ಹಕ್ಕುಗಳು ಮತ್ತು ಅವಕಾಶಗಳ ಸಮಾನತೆ ಹಾಗೂ ಮಹಿಳೆಯರ ಮತದಾನ ಸ್ವಾತಂತ್ರ್ಯ. ಇವುಗಳನ್ನು ಗುರಿ ಹೊಂದಿ ಕೆಲಸ ನಿರ್ವಹಿಸಿದವು. ಆ ಮೂಲಕ ಮಹಿಳೆಯರು ಸಮಾಜದಲ್ಲಿ ಬಹುಮುಖ್ಯ ಹಾಗೂ ರಚನಾತ್ಮಕ ಪಾತ್ರನಿರ್ವಹಿಸುವಂತೆ ಅವರನ್ನು ಪ್ರೋತ್ಸಾಹಿಸುವುದು ಮತ್ತು ಪುರುಷರಿಗೂ ಮಹಿಳೆಯರಿಗೂ ಸಮಾನ ಹಕ್ಕುಗಳನ್ನು ಅಂದರೆ ರಾಜಕೀಯ, ಆರ್ಥಿಕ ಮತ್ತು ಕೌಟುಂಬಿಕ ಕ್ಷೇತ್ರಗಳಲ್ಲಿ ಪುರುಷರು ಅನುಭೋಗಿಸುತ್ತಿರುವ ನಾಗರೀಕ ಹಕ್ಕುಗಳನ್ನು ಮಹಿಳೆಯರಿಗೂ ವಿಸ್ತರಿಸುವುದು. ಈ ಲಿಂಗ ಸಂಸ್ಥೆಗಳು ಇದಕ್ಕಾಗಿ ಬಳಸಿಕೊಂಡ ತಂತ್ರಗಳೆಂದರೆ, ಸಾರ್ವಜನಿಕ ಸಭೆಗಳನ್ನು ಸಂಘಟನೆ ಬೇಡಿಕೆಗಳ ರಚನೆ, ಸರ್ಕಾರಿ ಅಧಿಕಾರಿಗಳ ಮುಂದೆ ವಿಚಾರಗಳ ಮಂಡನೆ, ಪರಿಸ್ಥಿತಿಗಳ ಪರಿಶೀಲನೆಗೆ ಸಮಿತಿಗಳ ರಚನೆ ಹಾಗೂ ಮಹಿಳೆಯರು ಚಲನಶೀಲರಾಗುವಂತೆ ಮಾಡಲು ಸಮಾವೇಶಗಳ ವ್ಯವಸ್ಥೆ ಇದರ ಪರಿಣಾಮವಾಗಿ ಎರಡು ನಿಲುವನ್ನು ತಿಳಿಯಬಹುದು.

(1) ಮಹಿಳೆಯರ ಏಳಿಗೆ

(2) ಪುರುಷರಿಗೆ ಸಮನಾದ ಎಲ್ಲ ಬಗ್ಗೆ ಹಕ್ಕುಗಳನ್ನು ಹೊಂದುವುದು

ಹೀಗೆ ಮಹಿಳೆಯರಿಗೆ ಹಲವು ಹಕ್ಕುಗಳು, ಸಮಾನತೆ, ಸ್ವಾತಂತ್ರ್ಯವನ್ನು ದೊರಕಿಸಿಕೊಡಲು ಹೋರಾಡಿದವರಲ್ಲಿ ರಾಜಾರಾಂ ಮೋಹನ್‌ರಾಯ್, ಈಶ್ವರ ಚಂದ್ರ ವಿದ್ಯಾಸಾಗರ್, ರಾನಡೆ, ಕೇಶವ ಚಾಂದ್ರಸೇನ್, ಪಂಡಿತ ರಮಾಬಾಯಿ, ಗೋಖಲೆ, ದಯಾನಂದ ಸರಸ್ವತಿ, ಆ್ಯನಿಬೆಸೆಂಟ್, ಮಾರ್ಗರೇಟ್ ಕಸಿನ್ಸ್, ಸೋದರಿ ನಿವೇದಿತಾ, ಸರೋಜಿನಿ ನಾಯ್ಡು, ವಿವೇಕಾನಂದರು ಮತ್ತು ಮಹಾತ್ಮಗಾಂಧಿಯವರು ಶ್ರಮಿಸಿದ್ದಾರೆ. ಇವರುಗಳೆಲ್ಲದರ ಹೋರಾಟದ ಫಲದಿಂದಲೇ ಮಹಿಳೆಯರ ಸ್ಥಾನಮಾನ ಹಾಗೂ ಹಕ್ಕುಗಳನ್ನು ಉತ್ತಮಪಡಿಸಲು ಬ್ರಿಟಿಷರು ನಿರ್ದಿಷ್ಟವಾದ ಕಾನೂನು ಕ್ರಮಗಳನ್ನು ಜಾರಿಗೆ ತಂದರು. ಹಾಗೆಯೇ ರಾಜಕೀಯ ಕ್ಷೇತ್ರದಲ್ಲಿ ಶರವೇಗದಲ್ಲಿ ಮಹಿಳೆಯರ ಪ್ರವೇಶವು ಈ ಕಾಲದ ಮತ್ತೊಂದು ಘಟ್ಟವಾಗಿದೆ. ಈ ನಿಟ್ಟಿನಲ್ಲಿ ಮಹಿಳೆಯರನ್ನು ಪ್ರೋತ್ಸಾಹಿಸಿ, ಅವರ ಸ್ಥಾನಮಾನವನ್ನು ಉತ್ತಮಪಡಿಸಲು ಮಹಾತ್ಮ ಗಾಂಧಿಯವರು ಮಾಡಿದ ಸೇವೆ ಸ್ಮರಣೀಯವಾಗಿದೆ. ಅವರು ಮಹಿಳೆಯರು ಸಕ್ರಿಯ ರಾಜಕಾರಣದಲ್ಲಿ ಸಂಪೂರ್ಣವಾಗಿ ಭಾಗವಹಿಸಬೇಕೆಂದು ಉದ್ದೇಶಪೂರ್ವಕವಾಗಿ ಮತ್ತು ಅವಿಶ್ರಾಂತವಾಗಿ ವಾದಿಸಿದರು. ಅವರು ಪುರುಷರಿಗೆ ಸರಿಸಮಾನವಾಗಿ ಅಹಿಂಸಾತ್ಮಕ ಸ್ವಾತಂತ್ರ್ಯ ಚಳುವಳಿಯಲ್ಲಿ ಭಾಗವಹಿಸಿ ಉದಾತ್ತ

ಸೇವೆ ಸಲ್ಲಿಸುವಂತೆ ಮಹಿಳೆಯರಿಗೆ ಕರೆ ನೀಡಿದರು. ಇಂಗ್ಲೀಷ್ ಶಿಕ್ಷಣದ ಸವಿಯನ್ನುಂಡ ಮಹಿಳೆರು ಮಾತ್ರವಲ್ಲದೆ, ಸಮಾಜದ ಕೆಳಗಿನ ಸ್ತರ ಹಾಗೂ ಸಾಂಪ್ರದಾಯವಾದ ವರ್ಗಗಳಿಗೆ ಸೇರಿದ ಮಹಿಳೆಯರೂ ಸಹ ತಮ್ಮ ಏಕತಾನತೆಯ ಪ್ರತೀಕತೆಯ ಜೀವನವನ್ನು ತೊರೆದು ಜನ್ಮಭೂಮಿಯ ಸ್ವಾತಂತ್ರ್ಯಕ್ಕಾಗಿ ಹೋರಾಡುವುದಕ್ಕಾಗಿ ಮನೆಗಳಿಂದ ಹೊರ ಬರುವ ಹಕ್ಕು ಬಾಧ್ಯತೆಗಳನ್ನು ಬೆಳೆಸಿಕೊಂಡರು. ಯಾವ ರೀತಿಯಲ್ಲಿ ಭಾಗವಹಿಸಿದರೆಂದರೆ ಮಹಿಳೆಯರು ನಗರಗಳಿಂದ, ಹಳ್ಳಿಗಳಿಂದ ಸಾವಿರಾರು ಸಂಖ್ಯೆಯಲ್ಲಿ ಧಾವಿಸಿ ಬಂದರು. ಮೆರವಣಿಗೆಯನ್ನು ನಡೆಸಿದರು. ಮಧ್ಯದ ಅಂಗಡಿಯನ್ನು ಮತ್ತೆ ಜನರು ಮಧ್ಯಪಾನ ಮಾಡದಂತೆ ತಡೆದರು. ಮುಷ್ಕರಗಳನ್ನು ಕೈಗೊಂಡರು. ನಿಶ್ಯಬ್ಧವಾಗಿ ಕಾನೂನುಗಳನ್ನು ಉಲ್ಲಂಘಿಸಿದರು. ಲಾಠಿ ಪ್ರಹಾರ ಹಾಗೂ ಗುಂಡಿನೇಟುಗಳನ್ನು ಧೈರ್ಯದಿಂದ ಎದುರಿಸಿದರು. ಬಂಧನಕ್ಕೊಳಗಾದರು. ಈ ಬಗೆಯಲ್ಲಿ ಮಹಿಳೆಯರು ತಾವು ಪುರುಷರಷ್ಟೆ ದಕ್ಷತೆಯಿಂದ ಯಾವುದೇ ಕ್ಷೇತ್ರದಲ್ಲಿ ಗುರುತರ ಹೊಣೆಗಾರಿಕೆಯನ್ನು ನಿರ್ವಹಿಸಬಲ್ಲೆವು ಎಂಬುದನ್ನು ರುಜುವಾತು ಮಾಡಿ ತೋರಿಸಿದರು. ಗಾಂಧೀಜಿಯವರೇ ಹೇಳಿದ ಮಾತು ಇಲ್ಲಿ ಗಮನಾರ್ಹ – "ಭಾರತದ ಮಹಿಳೆಯರು ನಿರ್ವಹಿಸಿದ ಪಾತ್ರಗಳನ್ನು ಸುವರ್ಣಾಕ್ಷರಗಳಲ್ಲಿ ಬರೆದಿಡುವಂತಹುದು" ಎಂದು ತಿಳಿಸಿದ್ದಾರೆ.

ಬ್ರಿಟಿಷರ ಕಾಲದಲ್ಲಿ ಭಾರತೀಯ ಮಹಿಳೆಯರ ಹಕ್ಕು ಬಾದ್ಯತೆ, ಸ್ಥಾನಮಾನಗಳಲ್ಲಿ ಮಹತ್ತರವಾದ ಸುಧಾರಣೆ ಕಂಡುಬಂದಿತು. ಈ ಕಾಲವು ಹಿಂದೂ ಮಹಿಳೆಯರ ವಿಮೋಚನಾ ಇತಿಹಾಸದಲ್ಲಿ ಅತ್ಯಂತ ಮುಖ್ಯವಾದ ಹಂತ ಎಂಬುದು ಸರಿಯಾದ ಮಾತು. ಇದು ಕಳೆದು ಹೋದ ವೈಭವದ ಪುನಃ ಪ್ರಾಪ್ತಿ ಹಾಗೂ ಪುನರುಜ್ಜೀವನ ಹಾಗೂ ಅದನ್ನು ಸ್ವತಂತ್ರ ಭಾರತದ ನೂತನ ಪರಿಸ್ಥಿತಿಗಳು ಮತ್ತು ಬೇಡಿಕೆಗಳಿಗೆ ಅನುಗುಣವಾಗಿ ಸರಿಹೊಂದಿಸಬೇಕೆಂಬ ಒಂದು ವಿಭಿನ್ನ ಇಚ್ಛೆ ಮತ್ತು ಮೆಚ್ಚತಕ್ಕ ಪ್ರಯತ್ನ ಎನ್ನಬಹುದು.

# ಅಧ್ಯಾಯ - 4

## ಸ್ವಾತಂತ್ರ್ಯ ನಂತರದಲ್ಲಿನ ಸಂವಿಧಾನತ್ಮಕ ಹಾಗೂ ಸಾಮಾಜಿಕ ಹಕ್ಕುಗಳು

ಭಾರತವು ಸ್ವಾತಂತ್ರ್ಯವನ್ನು ಪಡೆದ ಮೇಲೆ ಸ್ತ್ರೀಯರ ಸಮಾನತೆ ಹಾಗೂ ಹಕ್ಕುಗಳ ದೃಷ್ಟಿಯಿಂದ ಶಾಸನಾತ್ಮಕ ಶೈಕ್ಷಣಿಕ ಆರ್ಥಿಕ ಮತ್ತಿತ್ತರ ಕಾನೂನುಗಳನ್ನು ಕೈಗೊಳ್ಳಲಾಯಿತು. ಸ್ವತಂತ್ರ ಭಾರತವು 1950 ಜನವರಿ 26ರಂದಿನಿಂದ ಜಾರಿಗೊಂಡ ಮೇಲೆ ಕಾನೂನಿನಾತ್ಮಕವಾಗಿ ಸ್ತ್ರೀಯರು ಎಲ್ಲಾ ವಿಷಯಗಳಲ್ಲೂ ಪುರುಷರಿಗೆ ಸಮಾನರೇ ಆಗಿದ್ದಾರೆ. ಸಂವಿಧಾನವುದ 14 ಹಾಗೂ 15ನೇ ವಿಧಿಗಳು ಸಮಾನತೆಯ ಹಕ್ಕನ್ನು ದೇಶದ ಎಲ್ಲಾ ಪೌರರಿಗೆ ಯಾವುದೇ ಬಗೆಯ ವರ್ಗ-ಜಾತಿ-ಲಿಂಗ-ಮತ-ಭೇದಗಳನ್ನು ಪರಿಗಣಿಸದೆ, ಇಲ್ಲಾ ಪ್ರಜೆಗಳಿಗೆ ಸಾಮಾಜಿ, ಆರ್ಥಿಕ ಹಾಗೂ ರಾಜಕೀಯ ನ್ಯಾಯ, ಅಭಿವ್ಯಕ್ತಿ, ನಂಬಿಕೆ, ಧರ್ಮ, ಶ್ರದ್ಧೆ ಹಾಗೂ ಆರಾಧನಾ ಸ್ವಾತಂತ್ರ್ಯ - ಹಾಗೂ ಸಮಾನ ಹಕ್ಕುಗಳನ್ನು ನೀಡಿದೆ. ಇದರಿಂದ ಹಲವಾರು ಶತಮಾನಗಳ ಅವಧಿಯುದ್ದಕ್ಕೂ ಸ್ತ್ರೀಯರನ್ನು ಶಾಸ್ತ್ರಗಳ ಕಾನೂನಿನ ದೃಷ್ಟಿಯಿಂದ ಎರಡನೇ ಪ್ರಜೆಗಳನ್ನಾಗಿ ನೋಡುತ್ತದ್ದ ಆಚರಣೆಗೆ ಈ ಶಾಶ್ವತವಾದ ತೆರೆಯೊಂದನ್ನು ಎಳೆದಂತಾಯಿತು.

ಲಿಂಗತಾರತಮ್ಯವಿಲ್ಲದೆ ನೀಡಲಾದ ಸಾಂವಿಧಾನಿಕ ಸಮಾನತೆ ಅಂದರೆ ಸಂವಿಧಾನವು ಸ್ತ್ರೀಯರಿಗೂ ಕೂಡು ಪುರುಷರಿಗೆ ಸಮಾನವಾದ ವೈಯಕ್ತಿಕ ಸ್ವಾತಂತ್ರ್ಯ ಮೂಲಭೂತ ಹಕ್ಕಗಳು, ವಿಚಾರ ಸ್ವಾತಂತ್ರ್ಯ ಅಭಿವ್ಯಕ್ತಿ ಸ್ವಾತಂತ್ರ್ಯದ ಹಕ್ಕು, ಧಾರ್ಮಿಕ ವೈವಾಹಿಕ, ರಾಜಕೀಯ, ಶೈಕ್ಷಣಿಕ ಹೀಗೆ ಎಲ್ಲಾ ಬಗೆಯ ಸ್ವಾತಂತ್ರ್ಯವನ್ನು ನೀಡಿರುವ ಭರವಸೆಯನ್ನು ನೀಡಿತು.

ಸಂವಿಧಾನವು ಅನುಷ್ಠಾನಕ್ಕೆ ಬಂದ ಹೊಸದರಲ್ಲಿಯೇ ಅಂದರೆ 1952ರಲ್ಲಿ ನಡೆದ ಪ್ರಪ್ರಥಮ ಸಾರ್ವತ್ರಿಕ ಚುನಾವಣೆಯಲ್ಲಿ ಸಮಾನ ಹಕ್ಕುಗಳೊಂದಿಗೆ ಚುನಾವಣಾ ಕಣದಲ್ಲಿ ಹಾಗೂ ಮತ ನೀಡುವ ಪ್ರಕ್ರಿಯೆಯಲ್ಲಿ ಭಾಗಿಗಳಾದ ಭಾರತೀಯ ಸ್ತ್ರೀಯರು ತಮಗೆ ಆಗ ತಾನೇ ನೀಡಲಾಗಿದ್ದ ಸ್ವಾತಂತ್ರ್ಯ ಹಾಗೂ ಹಕ್ಕುಗಳ ಚಲಾವಣೆಯ ಮೊಟ್ಟ ಮೊದಲನೆಯ ಹಾಗೂ ರೋಮಾಂಚನಕಾರಿಯಾದ ಅನುಭವವನ್ನು ಪಡೆದರು. ಬ್ರಿಟಿಷ್ ಕಾಲದಲ್ಲಿ ಸೀಮಿತವಾಗಿದ್ದ ಮತದಾನದ ಹಕ್ಕು ಈಗಿನ ವಯಸ್ಕ ಮತದಾನದ ತತ್ವದಿಂದ ಸಾರ್ವತ್ರಿಕವಾಗಿ ಎಲ್ಲರಿಗೂ ನೀಡಲ್ಪಟ್ಟಿತ್ತು.

ಸಂವಿಧಾನಾತ್ಮಕವಾಗಿ ಸಮಾನ ಹಕ್ಕುಗಳನ್ನು ನೀಡಿದ್ದಾಗ್ಯೂ ಸಮಾಜದ ಪರಂಪರಾಗತವಾದ ಕೆಲವು ಕೆಟ್ಟ ಆಚರಣೆಗಳನ್ನು ಹೋಗಲಾಡಿಸದಿದ್ದರೆ ಮಹಿಳೆಯರು ಆಧುನಿಕ ಯುಗದ ಮುಕ್ತ ಜೀವನವನ್ನು ನಡೆಸುವುದು. ಕಷ್ಟವೆಂಬುದನ್ನು ಮನಗಂಡು ನಮ್ಮ ಕಾನೂನು ತಜ್ಞರು 'ಹಿಂದೂ ಕೋಡ್'ನು ಸಿದ್ಧಪಡಿಸಿ, ಅದಕ್ಕೆ ಸಂಬಂಧಿಸಿದಂತೆ ಹಲವಾರು ಮಸೂದೆಗಳು ಕಾಲಕ್ಕೆ ಲೋಕಸಭೆಯಲ್ಲಿ ಚರ್ಚೆಗೆ ಬಂದುವು. ಅವುಗಳಲ್ಲಿ ಹಲವು ಮಸೂದೆಗಳು ಕಾಯ್ದೆಯಾಗಿ ಪರಿವರ್ತನೆಗೊಂಡವು. ಸ್ತ್ರೀಯರ ಅಂತಸ್ತಿನ ಹೆಚ್ಚಳಕ್ಕೆ ಹಾಗೂ ಸ್ತ್ರೀಯರ ಕಲ್ಯಾಣಕ್ಕೆ ಸಂಬಂಧಿಸಿದಂತೆ ಕೆಲವು ಶಾಸನಗಳು ಜಾರಿಗೆ ಬಂದವು.

ಬ್ರಿಟಿಷರ ಕಾಲದಿಂದ ಬಂದ ಚಳುವಳಿ ಹಾಗೂ ಸ್ವಾತಂತ್ರ್ಯ ಹೋರಾಟದ ಸಮಯದಲ್ಲಿ ಭಾರತ ರಾಷ್ಟೀಯ ಕಾಂಗ್ರೆಸ್‌ನಲ್ಲಿ ಮಹಿಳೆಯರು ವಹಿಸಿದ ಪ್ರಧಾನ ಪಾತ್ರವು ಸ್ವಾತಂತ್ರ್ಯದ ತರುವಾಯ ಅವರಿಗೆ ಪ್ರಯೋಜನಕಾರಿಯಾದವು.

ಅವರು ಜೀವನದ ಎಲ್ಲ ಕ್ಷೇತ್ರಗಳಲ್ಲಿ ಸಮಾನತೆ ಹಾಗೂ ಸ್ವಾತಂತ್ರ್ಯದ ಹಕ್ಕನ್ನು ಹೊಂದುವಂತಾಯಿತು. ಅನೇಕ ಮಹಿಳೆಯರು ರಾಷ್ಟ್ರದಲ್ಲಿ ಅತ್ಯುಚ್ಚ ಆಡಳಿತ ಹಾಗೂ ರಾಯಭಾರಿ ಹುದ್ದೆಗಳನ್ನು ಅಲಂಕರಿಸಿದ್ದಾರೆ. ಉದಾಹರಣೆಗೆ : ಶ್ರೀಮತಿ ಸರೋಜಿನಿ ನಾಯ್ಡು ಮತ್ತು ವಿಜಯಲಕ್ಷ್ಮಿ ಪಂಡಿತ್ ರಾಜ್ಯಗಳ ರಾಜ್ಯಪಾಲೆಯಾಗಿ ಸೇವೆ ಸಲ್ಲಿಸಿದರು. ಅಲ್ಲದೆ ಶ್ರೀಮತಿ ವಿಜಯಲಕ್ಷ್ಮಿ ಪಂಡಿತ್ ರಾಯಭಾರಿ, ವಿಶ್ವಸಂಸ್ಥೆ ಪ್ರತಿನಿಧಿ ಮುಂತಾದ ರಾಯಭಾರ ಸೇವಾ ವಿಭಾಗಗದಲ್ಲಿ ಅನೇಕ ಉನ್ನತ ಸ್ಥಾನಗಳನ್ನು ಅಲಂಕರಿಸಿದ್ದರು. ಪ್ರಥಮ ಹೈಕೋರ್ಟ್ ನ್ಯಾಯಧೀಶೆಯಾದ ಕೀರ್ತಿ ಕೇರಳದ ಶ್ರೀಮತಿ ಅನ್ನಚಾಂಡಿಯವರಿಗೆ ಸಲ್ಲುತ್ತದೆ. ಭಾರತದ ಪ್ರಥಮ ಮಹಿಳಾ ಪ್ರಧಾನ ಮಹಿಳೆಯಾದ ಯಶಸ್ಸು ಶ್ರೀಮತಿ ಇಂದಿರಾಗಾಂಧಿಯವರಿಗೆ ಸಲ್ಲುತ್ತದೆ. ಐ.ಪಿ.ಎಸ್. ಕಿರಣ್‌ಬೇಡಿ ಇತ್ತೀಚಿನ ಸಾಧ'ರೆ ಸುಧಾ ನಾರಾಯಣಮೂರ್ತಿ ಹೀಗೆ ಸಾರ್ವಜನಿಕ ಹಾಗೂ ಖಾಸಗಿ ಇಲಾಖೆಗಳ ಎಲ್ಲ ವಿಭಾಗಗಳಲ್ಲಿ ಮತ್ತು ವೈದ್ಯಕೀಯ ಹಾಗೂ ಉಪಾಧ್ಯಾಯ ವೃತ್ತಿಗಳಿಂದ ಹಿಡಿದು ಇಂಜಿನಿಯರಿಂಗ್, ಮಾಹಿತಿ ತಂತ್ರಜ್ಞಾನ, ಕಾನೂನು ಹಾಗೂ ವೈಮಾನಿಕ ಕ್ಷೇತ್ರಗಳವರೆಗೆ ಮಹಿಳಾ ಉದ್ಯೋಗಿಗಳ ಸಂಖ್ಯೆ ಗಮನಾರ್ಹವಾಗಿ ಪ್ರಗತಿಯನ್ನು ಕಂಡಿದೆ ಎಂದರೆ ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಅವಳಿಗೆ ದೊರಕಿರುವ ಹಕ್ಕುಗಳ ಪ್ರಮಾಣ ಎಷ್ಟಿದೆ ಎನ್ನುವುದು ಮನವರಿಕೆಯಾಗುತ್ತದೆ.

ಸ್ವಾತಂತ್ರ್ಯಾನಂತರ ಆಧುನಿಕ ಶಾಸನಕರ್ತರು ತೆಗೆದುಕೊಂಡ ಮೊದಲ ಕ್ರಮವೆಂದರೆ ಹಿಂದೂ ಕ್ರೋಢಿಕೃತ ನ್ಯಾಯಸೂತ್ರಗಳ ಕರಡು ಪ್ರತಿಯನ್ನು ಸಿದ್ಧಪಡಿಸಿದ್ದು, ಅನೇಕ ತಾರತಮ್ಯಗಳನ್ನು ನಿವಾರಿಸುವ ಸಲುವಾಗಿ ಹಿಂದೂ ಕಾನೂನುಗಳನ್ನು ವ್ಯವಸ್ಥಿತಗೊಳಿಸಲು ಮತ್ತು ಸಾರ್ವತ್ರಿಕ ವ್ಯವಸ್ಥೆಯನ್ನು ರೂಪಿಸಲು ಒಂದು ಪ್ರಯತ್ನವಾಯಿತು. ಈ ನಿಟ್ಟಿನಲ್ಲಿ ತುಂಬಾ ಶ್ರಮಿಸಿದವರು ಅಂಬೇಡ್ಕರ್. ಹಿಂದೂ ನ್ಯಾಯಸೂತ್ರ ಮಸೂದೆಯು ಹಿಂದೆ ಪ್ರಾಚೀನ ಭಾರತದ ಧರ್ಮಶಾಸ್ತ್ರಕಾರರು ನಿರಾಕರಿಸಿದ್ದ ಹೆಣ್ಣು ಮಕ್ಕಳಿಗೆ ಆಸ್ತಿಯಲ್ಲಿ ಪಾಲು ನೀಡುವುದನ್ನು ಪ್ರತಿವಾದಿಸುತ್ತದೆ. ಜಾತಿ ಮತ್ತು ಉಪಜಾತಿಗಳ ನಡುವೆ ವಿವಾಹವನ್ನು ಮತ್ತು ಗಂಡ ಮತ್ತು ಹೆಂಡತಿ ಇಬ್ಬರಿಗೂ ಸಮಾನ ಹಕ್ಕುಗಳನ್ನು ಸಲಹೆ ಮಾಡುತ್ತದೆ ಹಾಗೂ ಪುನರ್ ವಿವಾಹಕ್ಕೆ ಮತ್ತು ನಿರ್ದಿಷ್ಟವಾದ ಕಾರಣಗಳ ಮೇಲೆ ವಿಚ್ಛೇದನ ನೀಡಲು ಶಿಫಾರಸ್ಸು ಮಾಡುತ್ತದೆ. ಹೀಗೆ ಹಿಂದೂ ನ್ಯಾಯಸೂತ್ರ ಮಸೂದೆಯು ಮಹಿಳೆಯರನ್ನು ಅಮಾನವೀಯ ಬ್ರಾಹ್ಮಣೀಕೃತ ನಿಯಮಗಳಿಂದ ವಿಮೋಚನೆಗೊಳಿಸಿ ಅವರನ್ನು ಮಾನವ ಸಮಾಜದ ಸದಸ್ಯರೆಂಬಂತೆ ಪರಿಗಣಿಸಿ, ಹಿಂದಿನ ದುರಾವಸ್ಥೆಗಳಿಂದ ಅವರನ್ನು ರಕ್ಷಿಸಲು ಯತ್ನಿಸುತ್ತದೆ. ಈ ಕಾಯಿದೆಯನ್ನು ಜಾರಿಗೆ ತರುವುದರ ವಿರುದ್ಧ ಸಂಪ್ರದಾಯವಾದಿ ಜನಗಳು ತೀವ್ರ ಪ್ರತಿಭಟನೆ ವ್ಯಕ್ತಪಡಿಸಿದರೂ ಅದು ಯಶಸ್ವಿಯಾಗಲಿಲ್ಲ ಎನ್ನುವುದುದನ್ನು ಮನಗಾಣಬಹುದು.

ಪುರುಷರಂತೆ ಮಹಿಳೆಯರಿಗೂ ಭಾರತದ ಸಂವಿಧಾನದಲ್ಲಿ ಕೊಡಮಾಡಲಾದ ಪ್ರಮುಖ ಹಕ್ಕುಗಳೆಂದರೆ, ಸಮಾನತೆಯ ಹಕ್ಕು, ಸ್ವಾತಂತ್ರ್ಯದ ಹಕ್ಕು, ಶೋಷಣೆ ವಿರುದ್ಧ ಹಕ್ಕು, ಧಾರ್ಮಿಕ ಸ್ವಾತಂತ್ರ್ಯ ಹಕ್ಕು, ಆಸ್ತಿಯ ಹಕ್ಕು, ಸಾಂಸ್ಕೃತಿಕ ಮತ್ತು ಶೈಕ್ಷಣಿಕ ಹಕ್ಕುಗಳು ಮತ್ತು ಸಾಂವಿಧಾನಿಕ ಪರಿಹಾರಗಳ ಹಕ್ಕು ಈ ಮೂಲಭೂತ ಹಕ್ಕುಗಳನ್ನು ಒದಗಿಸುವುದರೊಂದಿಗೆ ರಾಜ್ಯಗಳೂ ಸಹ ಮಹಿಳೆಯರಿಗೆ ಆದ್ಯತೆಯನ್ನು ನೀಡುವಲ್ಲಿ ಹಾಗೂ ಅವರ ಹಿತಾಸಕ್ತಿಗಳನ್ನು

ರಕ್ಷಿಸಲು ವಿಶೇಷ ಕಾನೂನುಗಳನ್ನು ಜಾರಿಗೊಳಿಸುವ ಅಧಿಕಾರವನ್ನು ಹೊಂದಿವೆ. ಮಹಿಳೆಯರ ಕೆಲವು ಹಕ್ಕುಬಾಧ್ಯತೆಗಳನ್ನು ಪೂರೈಸಬಲ್ಲ ಕೆಲವು ಕಾಯಿದೆಗಳು ಈ ಕೆಳಕಂಡಂತಿವೆ.

## 1) 1954ರ ವಿಶೇಷ ವಿವಾಹ ಕಾಯಿದೆ
## (Special Marriage Act of 1954)

ಈ ಕಾಯಿದೆಯು 1 ಏಪ್ರಿಲ್ 1955ರಲ್ಲಿ ಜಾರಿಗೆ ಬಂದಿತು. 1872ರ ವಿಶೇಷ ವಿವಾಹ ಕಾಯ್ದೆಗಿಂತಲೂ ಬಹಳ ವ್ಯಾಪಕ ಸ್ವರೂಪದ ಈ ಕಾಯ್ದೆಯು "ಪೌರ ವಿವಾಹ ಕಾಯ್ದೆ (The Civil Marriage Act) ಎಂಬುದಾಗಿಯೂ ಜನಪ್ರಿಯವಾಗಿದ್ದು "ಮತೇತರ" ಗುಣಗಳನ್ನು ಹೊಂದಿದೆ ಎನ್ನಬಹುದು. ಈ ಕಾಯಿದೆಯು ಮಹಿಳಾ ಪರ ಯೋಜನೆಗಳಿಗೆ ಸಾಕಷ್ಟು ಬತ್ತು ನೀಡಿದೆ. ಅವುಗಳೆಂದರೆ,

(ಎ) ವಿವಾಹದ ವಯೋಮಿತಿಯನ್ನು ಗಂಡಸರಿಗೆ 18 ಮತ್ತು ಹೆಂಗಸರಿಗೆ 15 ಎಂದು ಕಾಯಿದೆ ನಿಗಧಿಪಡಿಸಿತು. ಇದರಿಂದ ಬಾಲ್ಯವಿವಾಹವನ್ನು ಪೂರ್ಣವಾಗಿ ತೊಡೆದು ಹಾಕಲಾಯಿತು.

(ಬಿ) ಅಂತರ್ಜಾತಿಯ ವಿವಾಹಗಳಿಗೆ ಅವಕಾಶ ನೀಡಿತು. ಇದರಿಂದ ಮಹಿಳೆಯರು ಹೆಚ್ಚು ಮುಕ್ತವಾಗಿ ತಮ್ಮ ವೈವಾಹಿಕ ವಿಚಾರದ ನಿರ್ಧಾರ ತೆಗೆದುಕೊಳ್ಳುವ ಹಕ್ಕನ್ನು ಪಡೆದಂತಾಯಿತು.

(ಸಿ) ವಿವಾಹಕ್ಕೆ ಸಂಬಂಧಿಸಿದ ಕಾನೂನುಬದ್ಧ ಅರ್ಹತೆ ಮತ್ತು ಅನರ್ಹತೆಗಳನ್ನು ಸ್ತ್ರೀ–ಪುರುಷರಿಗೆ ಇದು ಸಮಾನವಾಗಿಯೇ ನಿಗಧಿಪಡಿಸುವುದು.

(ಡಿ) ವಿವಾಹದ ನೊಂದಣಿಗೆ (Registration) ಈ ಕಾಯ್ದೆ ಅವಕಾಶ ನೀಡುತ್ತಿದ್ದು, ವಿವಾಹಯೋಗ್ಯ ವಯಸ್ಸಿನ ಸ್ತ್ರೀ–ಪುರುಷರು ಪರಸ್ಪರ ಸಹಮತದಿಂದ ಅಂದರೆ ಪ್ರೇಮ ವಿವಾಹವಾಗಲು ಅನುವು ಮಾಡುವುದು.

(ಇ) ವಿವಾಹ ವಿಚ್ಛೇದನ ವಿಚಾರದಲ್ಲೂ ಈ ಕಾಯ್ದೆಯು ಗಂಡಂದಿರಿಗೆ ಇರುವಷ್ಟೇ ಹಕ್ಕುಗಳನ್ನು ಸ್ತ್ರೀಯರಿಗೂ ನೀಡುವುದು. ಸ್ತ್ರೀಯರಿಗೆ ವೈವಾಹಿಕ ವಿಚಾರಗಳಲ್ಲಿ ಸಮಾನ ಹಕ್ಕುಗಳನ್ನು ನೀಡುವುದರ ಮೂಲಕ ಅವರ ಮಹಿಳೆಯ ಗೌರವ ಮತ್ತಷ್ಟು ಎತ್ತರಿಸಲು ಈ ಕಾಯ್ದೆ ಸಹಾಯಕವಾಯಿತು. ನಂತರ ಜಾರಿಗೆ ಬಂದ ಕಾಯಿದೆ ಎಂದರೆ

## 2) 1955ರ ಹಿಂದೂ ವಿವಾಹ ಕಾಯಿದೆ
## (The Hindu Marriage Act of 1955)

ಈ ಕಾಯಿದೆಯು 18 ಮೇ 1955 ರಂದು ಜಾರಿಗೆ ಬಂದಿತು ಮತ್ತು ಜಮ್ಮು ಮತ್ತು ಕಾಶ್ಮೀರವನ್ನು ಹೊರತುಪಡಿಸಿ ಸಮಗ್ರ ಭಾರತಕ್ಕೆ ಈ ಕಾಯಿದೆಯು ಅನ್ವಯವಾಗುತ್ತದೆ. ಈ ಶಾಸನದಲ್ಲಿ ಪ್ರಪ್ರಥಮ ಬಾರಿಗೆ 'ಹಿಂದೂ' ಎಂಬ ಪದಕ್ಕೆ ಕಾನೂನಿನ ವ್ಯಾಖ್ಯಾನವನ್ನು ನೀಡುವ ಪ್ರಯತ್ನದ ಜೊತೆಗೆ ಸಮಸ್ತ ಹಿಂದೂ ಸಮುದಾಯಕ್ಕೆ ಅನ್ವಯಿಸುವ

ವಿವಾಹದ ಕಾನೂನನ್ನು ರಚಿಸಲಾಯಿತು. ಈ ಕಾಯಿದೆಯ ಮಹಿಳೆಯ ದೃಷ್ಟಿಕೋನದಿಂದ ಹಲವು ಮುಖ್ಯ ಅಂಶಗಳನ್ನು ಪ್ರಕಟಿಸಿತು.

(ಎ) ಈ ಶಾಸನವು ಹಿಂದುಗಳಲ್ಲಿದ್ದ ಬಹುಪತ್ನಿತ್ವ / ಅಪರೂಪವಾದ ಬಹುಪತ್ನಿತ್ವ ಪದ್ಧತಿಯನ್ನು ರದ್ದುಗೊಳಿಸುವುದು.

(ಬಿ) ಬಾಲ್ಯವಿವಾಹವನ್ನು ನಿಷೇಧಿಸುವುದು.

(ಸಿ) ವಿವಾಹ ವಿಚ್ಛೇದನಕ್ಕೆ ಪುರುಷರಿಗೆ ಮಾತ್ರವಲ್ಲದೆ ಸ್ತ್ರೀಯರಿಗೂ ಸಮಾನವಾದ ಹಕ್ಕುಗಳನ್ನು ನೀಡುವುದರ ಜೊತೆಗೆ ಗಂಡಂದಿರ ಮೇರೆ ಮೀರಿದ ಲೈಂಗಿಕ ಅತ್ಯಾಚಾರ ಮತ್ತು ಕ್ರೌರ್ಯಗಳ ನೆಲೆಗಳಲ್ಲಿಯೂ ಹೆಂಡತಿಯರು ವಿಚ್ಛೇದನ ಪಡೆಯಬಹುದು.

(ಡಿ) ವಿಚ್ಛೇದನ ಪಡೆದ ನಂತರ ಪುರುಷರಂತೆ ಸ್ತ್ರೀಯರೂ ಕೂಡ ಒಂದು ವರ್ಷದ ಬಳಿಕ ಮರುವಿವಾಹವಾಗಲು ಈ ಶಾಸನವು ಅವಕಾಶ ನೀಡುವುದು.

## (3) 1956ರ ಹಿಂದೂ ಉತ್ತರಾಧಿಕಾರ ಕಾಯಿದೆ
## (The Hindu Suceession Act)

ಶತಮಾನಗಳಿಂದ ಹಿಂದೂ ಮಹಿಳೆಗೆ ಸ್ವತಃ ಆಸ್ತಿಯನ್ನು ಉತ್ತರಾಧಿಕಾರಿಯಾಗಿ ಪಡೆಯುವ ಹಕ್ಕನ್ನು ನಿರಾಕರಿಸಿತ್ತು. ಒಂದು ರೀತಿಯಲ್ಲಿ ಸಾಂಪ್ರದಾಯದ ಪ್ರಕಾರ ಮಹಿಳೆಗೆ ಆಸ್ತಿಯ ಉತ್ತರಾಧಿಕಾರದ ಹಕ್ಕನ್ನು ಕೊಟ್ಟಿದ್ದ ಮಾತೃಪ್ರಧಾನ ಮತ್ತು ಇವರ ಕೆಲವು ಸಮುದಾಯಗಳನ್ನು ಬಿಟ್ಟರೆ, ಮಹಿಳೆಯರನ್ನು ಆಸ್ತಿಯ ಉತ್ತರಾಧಿಕಾರದ ಹಕ್ಕಿನಿಂದ ಪೂರ್ಣವಾಗಿ ವಂಚಿಸಲಾಗಿತ್ತು. ಇದರಿಂದ ಆಕೆಯನ್ನು ಆರ್ಥಿಕವಾಗಿ ಅಲಕ್ಷಿಸಲಾಗಿತ್ತು. ಆದರೆ 'ಸ್ತ್ರೀದಾನ' ಅಥವಾ ವಿವಾಹದ ಸಂದರ್ಭದಲ್ಲಿ ಆಕೆಗೆ ಕೊಡಲಾಗುತ್ತಿದ್ದ ಆಭರಣ ಮುಂತಾದ ಚರಾಸ್ತಿಗೆ ಮಾತ್ರ ಆಕೆ ಹಕ್ಕುದಾರಳಾಗಿದ್ದಳು. ಆದರೆ ಅದನ್ನೂ ಸಹ ಆಕೆ ತನ್ನ ಹಕ್ಕೆಂದು ತಿಳಿದು ಪರಭಾರೆ ಮಾಡುವಂತಿರಲಿಲ್ಲ. ವಾರಸುದಾರಿಕೆಯ ಈ ಕಾನೂನಿನ ಅನರ್ಹತೆಯನ್ನು ನಿವಾರಿಸಲು ಸರ್ಕಾರದಿಂದ ಹಿಂದೂ ಉತ್ತರಾಧಿಕಾರದ ಕಾಯಿದೆ 17 ಜೂನ್ 1956ರಲ್ಲಿ ಜಾರಿಗೆ ಬಂದಿತ್ತು. ಈ ಕಾಯಿದೆಯಿಂದ ಮಹಿಳೆಗೆ ಕೆಲವು ಹಕ್ಕುಗಳು ಸಂದಾಯವಾಯಿತು. ಅವುಗಳೆಂದರೆ

(ಎ) ತನ್ನ ತಂದೆಯ ಆಸ್ತಿಯಲ್ಲಿ ಮಗಳಿಗೆ ಅವಳ ಸಹೋದರರಿಗೆ ಸಮಾನವಾದ ಆಸ್ತಿಯ ಹಕ್ಕನ್ನು ನೀಡಲಾಗಿತ್ತು.

(ಬಿ) ವಿಧವೆಯು ತನ್ನ ಮೃತ ಗಂಡನ ಆಸ್ತಿಯಲ್ಲಿ ತನ್ನ ಗಂಡು ಮಕ್ಕಳು ಮತ್ತು ಹೆಣ್ಣು ಮಕ್ಕಳಿಗೆ ಸಮಾನವಾದ ಪಾಲನ್ನು ಪಡೆಯುತ್ತಾಳೆ.

(ಸಿ) ಒಬ್ಬರಿಗಿಂತ ಹೆಚ್ಚು ಜನ ವಿಧವೆಯರಿದ್ದಲ್ಲಿ ಅವರೆಲ್ಲರೂ ಒಟ್ಟಿಗೆ ಒಂದು ಭಾಗವನ್ನು ಹಂಚಿಕೊಳ್ಳುವ ಹಕ್ಕನ್ನು ಪಡೆದಿರುತ್ತಾರೆ.

(ಈ) ಸ್ವತಃ ಸಂಪಾದಿಸಿದ ಆಸ್ತಿಯೂ ಕೂಡ ಸಾಯುವ ಮುನ್ನ ಅಂತಿಮ ಇಚ್ಛಾ ಪತ್ರವನ್ನು ಸಿದ್ಧಪಡಿಸದೇ ಇದ್ದಲ್ಲಿ ಪುರುಷನಷ್ಟೇ ಮಹಿಳೆಗೂ ಸಮಾನವಾಗಿ ಹಂಚಲ್ಪಡುತ್ತದೆ. ಅಂತಿಮವಾಗಿ

(ಎಫ್) ಈ ಕಾಯಿದೆಲ್ಲಿ ಸ್ತ್ರೀಧನ ಮತ್ತು ಸ್ತ್ರೀಧನವಲ್ಲದ್ದು ಎಂಬ ವ್ಯತ್ಯಾಸವನ್ನು ತೊಡೆದು ಹಾಕಲಾಗಿದೆ.

## (4) ಹಿಂದೂ ದತ್ತ ಮತ್ತು ಜೀವನಾಂಶ ಕಾಯಿದೆ 1956

### (The Hindu Adoptation and Maintenance Act of 1956)

ಮಕ್ಕಳನ್ನು ದತ್ತು ತೆಗೆದುಕೊಳ್ಳುವುದಕ್ಕೆ ಸಂಬಂಧಿಸಿದ ಈ ಕಾಯಿದೆಯಲ್ಲಿ ಕೇವಲ ಪುರುಷರಷ್ಟೇ ಮಕ್ಕಳನ್ನು ದತ್ತು ಪಡೆಯುವ ಹಕ್ಕನ್ನು ಮಹಿಳೆಯರಿಗೂ ವಿಸ್ತರಿಸಲಾಯಿತು. ಅವಿವಾಹಿತ ಸ್ತ್ರೀ, ವಿಧವೆ ಅಥವಾ ವಿಚ್ಛೇದನ ಹೊಂದಿದ ಸ್ತ್ರೀ 15 ವರ್ಷಕ್ಕೂ ಕಡಿಮೆ ವಯಸ್ಸಿನ ವ್ಯಕ್ತಿಯನ್ನು (ಹುಡುಗ ಅಥವಾ ಹುಡುಗಿ) ದತ್ತು ಪಡೆಯಬಹುದು. ಅಷ್ಟೇ ಅಲ್ಲ, ಬುದ್ಧಿಭ್ರಮಣೆ ಹೊಂದಿದ, ಸನ್ಯಾಸ ಸ್ವೀಕರಿಸಿದ ಅಥವಾ ಯಾವುದೇ ಕಾರಣದಿಂದ ಹಿಂದೂ ಧರ್ಮವನ್ನು ಪರಿತ್ಯಜಿಸಿದ ಪುರುಷನೊಬ್ಬನ ಪತ್ನಿಯು ತನ್ನ ಗಂಡನ ಸಮ್ಮತಿಯಿಲ್ಲದೆಯೇ ದತ್ತು ಸ್ವೀಕಾರ ಮಾಡಬಹುದು. ಮಗುವು 15 ವರ್ಷಕ್ಕೂ ಕಡಿಮೆ ವಯಸ್ಸನ್ನು ಹೊಂದಿರಬೇಕು. ಆದರೆ ಉಳಿದ ಸಂದರ್ಭಗಳಲ್ಲಿ ವಿವಾಹಿತ ಮಹಿಳೆಯು ತನ್ನ ಗಂಡನು ಜೀವಂತವಾಗಿರುವಾಗಲೇ ಆತನ ಅನುಮತಿಯಿಲ್ಲದೆ ದತ್ತು ಪಡೆಯುವಂತಿಲ್ಲ.

ಈ ಕಾಯಿದೆಯು ಹಿಂದೂ ಮಹಿಳೆಯು ಜೀವನಾಂಶ ಪಡೆಯುವ ಅಗತ್ಯ ಕಾನೂನು ಹಕ್ಕುಗಳನ್ನು ನೀಡಿದೆ. ಮೊದಲು ತನ್ನ ಪತಿಯೊಂದಿಗೆ ವಾಸಿಸುತ್ತಲೇ ಮಹಿಳೆ ಜೀವನಾಂಶ ಪಡೆಯಲು ಅರ್ಹಳಾಗಿದ್ದಳು. ಆದರೆ ಈ ಕಾಯಿದೆಯ ಪ್ರಕಾರ, ವಿವಾಹ ವಿಚ್ಛೇದನ ಪಡೆಯದೆ ತನ್ನ ಪತಿಯಿಂದ ಪ್ರತ್ಯೇಕವಾಗಿ ವಾಸಿಸುತ್ತಿದ್ದರೂ ಅಥವಾ ಅಧಿಕೃತವಾಗಿ ನ್ಯಾಯಾಂಗದ ಪ್ರತ್ಯೇಕತೆಗೆ ಪರವಾನಿಗೆಯನ್ನು ಪಡೆಯದೇ ಇದ್ದರೂ ಅಂತಹ ಸಂದರ್ಭಗಳಲ್ಲಿ ಮಹಿಳೆಯು ಜೀವನಾಂಶ ಪಡೆಯುವ ಹಕ್ಕನ್ನು ಹೊಂದಿದ್ದಳು. ಈ ಕಾಯಿದೆಯು ಮಹಿಳೆಯರಿಗೆ ಹೆಚ್ಚಿನ ಹೊಣೆಗಾರಿಕೆಗಳನ್ನೂ ಕೂಡ ನೀಡಿತ್ತು. ಉದಾ.: ದುಡಿದು ಸಂಪಾದಿಸುವ ಅಥವಾ ಆಸ್ತಿಯನ್ನು ಹೊಂದಿರುವ ಮಹಿಳೆಯರು ತಮ್ಮನ್ನು ನೆಚ್ಚಿಕೊಂಡಿರುವವರನ್ನು ಸಲಹಬೇಕೆಂಬ ಹೊಣೆಗಾರಿಗೆ ಒತ್ತು ನೀಡಿರುವುದು ಮತ್ತೊಂದು ಮುಖ್ಯ ಅಂಶವಾಗಿದೆ.

## (5) 1956 ರ ಹುಡುಗಿಯರ ಮತ್ತು ಮಹಿಳೆಯರ ಅನೈತಿಕ ವ್ಯವಹಾರ ಪ್ರತಿಬಂಧದ ಕಾಯಿದೆ

### (The Supression of Immoral Traffic of Women and Girls Act of 1956)

ವೇಶ್ಯಾ ವೃತ್ತಿಗೆ ಸಂಬಂಧಿಸಿದ ಸಾಮಾಜಿಕ ಅಪರಾಧಗಳನ್ನು ತಡೆಗಟ್ಟುವುದು, ಮನಸ್ಸಿಲ್ಲದೆ ಒತ್ತಾಯಪೂರ್ವಕ ಹಾಗೂ ಪರಿಸ್ಥಿತಿಯಿಂದ ವೇಶ್ಯೆಯಾಗುವ ಮಹಿಳೆಯರನ್ನು ಪಾರು ಮಾಡುವುದು. ಇನ್ನೂ ಮುಂತಾದ ಉದ್ದೇಶದಿಂದ ಈ ಕಾಯಿದೆ ರಚಿಸಲಾಯಿತು. 1978ರಲ್ಲಿ ಮತ್ತು ಸೆಪ್ಟೆಂಬರ್ 1986ರಲ್ಲಿ ಈ ಕಾಯಿದೆ ಎರಡು ಬಾರಿ ತಿದ್ದುಪಡಿಗೆ ಒಳಪಡಿಸಲಾಯಿತು. 1986ರಲ್ಲಿ ತಿದ್ದುಪಡಿಗೊಳಗಾದ ಕಾಯಿದೆಯು ಈಗ 'ಅನೈತಿಕ ವ್ಯಾಪಾರ ಪ್ರತಿಬಂಧಕ ಕಾಯಿದೆ 1986' ಎಂದು ಕರೆಯಲ್ಪಡುತ್ತದೆ.

ಇದರಿಂದ ಮಹಿಳಾ ಹಕ್ಕುಗಳು ತಮ್ಮದೇ ಆದ ಸ್ಥಾನವನ್ನು ಪಡೆಯುವಲ್ಲಿ ಸಫಲತೆಯನ್ನು ಪಡೆದವು.

## (6) ವರದಕ್ಷಿಣೆ ನಿಷೇಧ ಕಾಯಿದೆ 1961

## (The Dowry Probhibition Act of 1961)

ಈ ಕಾಯಿದೆ 20, ಮೇ 1961ರಲ್ಲಿ ಜಾರಿಗೆ ಬಂದಿತು. ಆರಂಭದಲ್ಲಿ ಕೇವಲ ಸಾಂಕೇತಿಕವಾಗಿ ಆಚರಣೆಯಲ್ಲಿದ್ದ ವರದಕ್ಷಿಣಾ ಪದ್ಧತಿಯು ಈ ಶತಮಾನದ ಆರಂಭದಿಂದ ಬೆಳೆಯುತ್ತಾ ಬಂದು ಒಂದು ಸಾಮಾಜಿಕ ಪಿಡುಗಾಗಿ ಸವಾಲಾಗಿ ಮಾರ್ಪಟ್ಟಿತು. ಇದನ್ನು ತೊಡೆದು ಹಾಕಲೆಂದೇ ಈ ಕಾಯಿದೆ ಜಾರಿಗೆ ಬಂದಿತು. ಇದರ ಪ್ರಕಾರ ವರದಕ್ಷಿಣೆ ಕೊಡುವುದು ಮತ್ತು ತೆಗೆದುಕೊಳ್ಳುವುದು ಎಂದೂ ಸಹ ಅಪರಾಧವೆನಿಸಿಕೊಳ್ಳುವುದು. ಈ ಕಾಯಿದೆಯಿಂದಲೂ ಈ ಪಿಡುಗು ನಿಲ್ಲದೆ ಇದ್ದಾಗ 1986ರಲ್ಲಿ ಇದನ್ನು ತಿದ್ದುಪಡಿ ಮಾಡಲಾಯಿತು. 1986ರ ವರದಕ್ಷಿಣೆ ನಿಷೇಧ (ತಿದ್ದುಪಡಿ) ಕಾಯ್ದೆಯಂತೆ ಇದನ್ನು ಉಲ್ಲಂಘಿಸಿದವರಿಗೆ 5 ವರ್ಷ ಸೆರೆಮನೆವಾಸ ಮತ್ತು 1500 ರೂ. ದಂಡವನ್ನು ನೀಡಬೇಕೆನ್ನುವ ಶಿಕ್ಷೆಯನ್ನು ಕೊಡಬಹುದಾಗಿತ್ತು. ಈ ಸಂಬಂಧವಾದ ಅಪರಾಧಗಳನ್ನು ಜಾಮಿನುರಹಿತ ಅಪರಾಧಗಳೆಂದು ಕೂಡಾ ಘೋಷಿಸಲಾಯಿತು. ಆದರೆ ಈ ಕಾಯಿದೆಯಲ್ಲಿನ ವಾಸ್ತವಿಕ ಅಂಶವೆಂದರೆ, ವರದಕ್ಷಿಣೆಯ ದೌರ್ಜನ್ಯಕ್ಕೆ ಒಳಗಾದ ಹುಡುಗಿಯ ಪರವಾಗಿ ಆಕೆ, ಆಕೆಯ ಪಕ್ಷ ಅಥವಾ ಮಾನ್ಯತೆ ಹೊಂದಿದ ಸಮಾಜ ಕಲ್ಯಾಣ ಸಂಘಟನೆ ಅಥವಾ ಮಹಿಳಾ ಸಂಘಟನೆಯು ನ್ಯಾಯಾಧಿಶರಿಗೆ ಅರ್ಜಿ ಸಲ್ಲಿಸಬಹುದು.

ಹೀಗೆ ಮಹಿಳೆಯ ಬಾಲ್ಯವಲಯದ ಹಕ್ಕುಗಳನ್ನು ಪಡೆಯಲು ಕೆಲವು ಕಾಯಿದೆಗಳು ಉಂಟಾದರೆ ಕೌಟುಂಬಿಕ ವಲಯಕ್ಕೂ ಸಹ ಕೆಲವು ಕಾಯಿದೆಗಳನ್ನು ಕಾಣಬಹುದು.

## 1961ರ ಪ್ರಸೂತಿ ಸೌಲಭ್ಯ ಕಾಯಿದೆ

## (The Maternity Benefit Act of 1961)

1961ರ ಕೇಂದ್ರ ಪ್ರಸೂತಿ ಸೌಲಭ್ಯ ಕಾಯಿದೆಯು 12 ಡಿಸೆಂಬರ್ 1961ರಲ್ಲಿ ರಾಷ್ಟ್ರಪತಿಗಳ ಅಂಗೀಕಾರ ಪಡೆಯಿತು. 1948ರ ಉದ್ಯೋಗಿಗಳ ರಾಜ್ಯ ಜೀವವಿಮಾ ಕಾಯಿದೆಯ ವ್ಯಾಪ್ತಿಗೆ ಬಾರದ ಮಹಿಳಾ ನೌಕರರನ್ನು ಒಳಗೊಳ್ಳುವಂತೆ ಈ ಕಾಯಿದೆಗೆ ಏಪ್ರಿಲ್ 1976ರಲ್ಲಿ ತಿದ್ದುಪಡಿಯನ್ನು ತರಲಾಯಿತು. 1961ರ ಪ್ರಸೂತಿಕಾ ಸೌಲಭ್ಯ ಕಾಯಿದೆಯು ಮೊದಲ ದೃಷ್ಟಾಂತದಲ್ಲಿ ಎಲ್ಲ ಗಣಿಗಳು, ಪ್ಲಾಂಟೇಶನ್‌ಗಳು ಮತ್ತು ಕಾರ್ಖಾನೆಗಳಿಗೆ ಅನ್ವಯವಾಗುತ್ತದೆ. ಇದರ ಪ್ರಮುಖ ಸವಲತ್ತುಗಳು ಯಾವುವುವೆಂದರೆ,

1) 12 ವಾರಗಳ ಅವಧಿಯ ಹೆರಿಗೆ ಸೌಲಭ್ಯ ವೇತನ.

2) ಸೌಲಭ್ಯದರ ಸರಾಸರಿ ದಿನಗೂಲಿ ವೇತನ ಇರುವುದು.

3) ಹೆರಿಗೆಗೆ ಮುನ್ನ ಉಂಟಾಗುವ ತೊಂದರೆಗಳು ಮತ್ತು ಹೆರಿಗೆಯ ನಂತರದ ಚೇತರಿಕೆಗೆ ಉಚಿತ ಚಿಕಿತ್ಸೆ ದೊರಕದಿದ್ದಲ್ಲಿ ವೈದ್ಯಕೀಯ ಬೋನಸ್ಸನ್ನು ನೀಡುವುದು.

4) ಗರ್ಭವಿಳಿತ ಪ್ರಕರಣಗಳಲ್ಲಿ ಪ್ರಸೂತಿಕಾ ಸೌಲಭ್ಯ ದರದಲ್ಲಿ ವೇತನ ಸಹಿತ ಆರು ವಾರಗಳ ರಜೆ ಮಂಜೂರು ಮಾಡುವುದು.

5) ಗರ್ಭಿಣಿಯಾಗಿದ್ದ ಸಮಯದಲ್ಲಿ, ಹೆರಿಗೆ ಸಮಯದಲ್ಲಿ, ಮಗುವಿಗೆ ಅಪ್ರಾಪ್ತ ಜನನದ ಸಮಯದಲ್ಲಿ ಅಥವಾ ಗರ್ಭವಿಳಿತ ಸಮಯದಲ್ಲಿ ಉದ್ಭವಿಸುವಂತಹ ಅನಾರೋಗ್ಯ ಪ್ರಕರಣಗಳಲ್ಲಿ ಮೇಲಿನ ದರದಲ್ಲಿ ವೇತನ ಸಹಿತ ಆರು ವಾರಗಳ ಅಧಿಕ ರಜೆ ನೀಡುವುದು.

6) ಶಿಶುವು 15 ತಿಂಗಳ ವಯಸ್ಸನ್ನು ತಲುಪುವವರೆಗೆ ಶಿಶುವಿನ ಪಾಲನೆ ಪೋಷಣೆ ಮಾಡಲು ಅಗತ್ಯವಾದ ನಿರ್ದಿಷ್ಟ ಕಾಲಾವಧಿಯ ಎರಡು ಹಂತಗಳಲ್ಲಿ ಮಧ್ಯಂತರ ವಿಶ್ರಾಂತಿಯೊಂದಿಗೆ ತಾಯಂದಿರಿಗೆ ಅನುಮತಿ ನೀಡುವುದು.

7) ಹೆರಿಗೆ ರಜಾ ಅವಧಿಯಲ್ಲಿ ಮಹಿಳಾ ನೌಕರಳು ಬಿಡುಗಡೆಯಾಗುವವರೆಗೆ ಗರ್ಭಿಣಿ ಮಹಿಳಾ ಕೆಲಸಗಾರರನ್ನು ವಜಾ ಮಾಡದಿರುವುದು.

ಹೀಗೆ ಪ್ರಸೂತಿಕಾ ಸೌಲಭ್ಯ ಕಾಯಿದೆಯು ಮಹಿಳಾ ನೌಕರರಿಗೆ ಸಾಕಷ್ಟು ವಿಶ್ರಾಂತಿ ಮತ್ತು ಆರ್ಥಿಕ ಸಹಾಯಗಳ ಹಕ್ಕನ್ನು ತಂದುಕೊಡುವುದರಲ್ಲಿ ಬಹುಮೌಲ್ಯವುಳ್ಳದ್ದಾಗಿದೆ.

## 1971ರ ವೈದ್ಯಕೀಯ ಗರ್ಭನಿವಾರಣಾ ಕಾಯಿದೆ

## (Medical Termination of Pregnancy Act of 1971)

ಈ ಕಾಯ್ದೆಯ ಮುಖ್ಯ ಉದ್ದೇಶವು ಕಾನೂನು ವಿರುದ್ಧವಾದ ಗರ್ಭಪಾತಗಳನ್ನು ತಡೆಗಟ್ಟುವುದೇ ಆಗಿದೆ. 1971ರ ಆಸ್ಪತ್ರೆಯ ದಾಖಲೆಗಳಂತೆ 15% ರಿಂದ 20% ಪ್ರಸೂತಿಕಾ ಸಾವುಗಳು ಗರ್ಭಪಾತದಿಂದಲೇ ಸಂಭವಿಸಿರುವುದು. ಅದರಲ್ಲೂ ಕದ್ದು–ಮುಚ್ಚಿ ಮಾಡುವ ಅವೈಜ್ಞಾನಿಕವಾದ ಗರ್ಭಪಾತಗಳಿಂದ ಕಂಡು ಬಂದಿದ್ದು. ಈ ಕಾಯ್ದೆಯನ್ನು ತರಲು ಪ್ರೇರಣೆ ನೀಡಿತು. ಅತ್ಯಾಚಾರದಿಂದ ಅಥವಾ ಗರ್ಭನಿರೋಧಕಗಳ ಬಳಕೆ ವಿಫಲಗೊಂಡು ಗರ್ಭನಿಲ್ಲುವುದಾದಲ್ಲಿ ಅದನ್ನು ಕಾನೂನು ಬದ್ಧವಾಗಿ ತೆಗೆಸಿ ಹಾಕಲು ಈ ಕಾಯಿದೆಯಲ್ಲಿ ಅವಕಾಶವಿದೆ.

## ಸಮಾನ ವೇತನ ಕಾಯ್ದೆ 1976

## (The Equal Remuneration Act of 1976)

ತುರ್ತು ಪರಿಸ್ಥಿತಿಯ ಅವಧಿಯಲ್ಲಿ ಬಂದ ಈ ಕಾಯ್ದೆಯ ಪ್ರಕಾರ "ಸಮಾನ ಕೆಲಸಕ್ಕೆ ಸಮಾನ ವೇತನ"ವನ್ನು ಸ್ತ್ರೀ–ಪುರುಷರಿಗೆ ತಾರತಮ್ಯವೆಣಿಸದೆ ನೀಡಬೇಕೆಂಬುದು ಈ ಕಾನೂನಿನ ಆಗ್ರಹ. ಬ್ಯಾಂಕ್, ರೈಲ್ವೆ, ಆಡಳಿತ ಇಲಾಖೆಗಳು, ಕೇಂದ್ರ ಸರ್ಕಾರದ ಸೇವಾ ವಿಭಾಗ, ಬೃಹತ್ ಪ್ರಮಾಣದ ಕಾರ್ಪೋರೇಶನ್‌ಗಳು ಮುಂತಾದವುಗಳಿಗೆ ಇದು ನೇರವಾಗಿ ಅನ್ವಯವಾಗುವುದು. ಆದಾಗ್ಯೂ ಈ ಕಾಯ್ದೆಗೆ ಕೊಟ್ಟಿರುವ ಪ್ರಚಾರ ಸಾಲದು ಎನ್ನಿಸುತ್ತದೆ. ಆದರೂ ಈ ಕಾಯಿದೆ ಸಮಗ್ರ ಭಾರತಕ್ಕೆ ಅನ್ವಯಿಸಲಾಗಿದೆ. ಎಲ್ಲಾ ಬಗೆಯ ಉದ್ಯೋಗಗಳಿಗೆ ಇದನ್ನು ವಿಸ್ತರಿಸಲಾಗಿದೆ.

ಈ ರೀತಿ ಹಂತ ಹಂತವಾಗಿ ವಿವಿಧ ರೀತಿ ಹಕ್ಕುಗಳನ್ನು ಮಹಿಳೆ ಪಡೆಯುತ್ತಾ ಬಂದರೂ ಅದು ಎಲ್ಲ ವರ್ಗದ ಮಹಿಳೆಯರಿಗೆ ಸಮರ್ಪಕವಾದ ರೀತಿಯಲ್ಲಿ ಬಳಕೆಯಾಗಿಲ್ಲ. ಇವಷ್ಟೇ ಅಲ್ಲದೆ ಇನ್ನೂ ಹಲವಾರು ರೀತಿಯ ಕಾಯ್ದೆಗಳು ಜಾರಿಗೊಂಡವು. ಅವುಗಳೆಂದರೆ,

1) ಕಾರ್ಖಾನೆಗಳ (ತಿದ್ದುಪಡಿ) ಕಾಯ್ದೆ 1976
(The Factories amendment act of 1976)

2) ವಿವಾಹ ಕಾನೂನುಗಳ (ತಿದ್ದುಪಡಿ) ಕಾಯ್ದೆ 1976
(Marriage laws amendment act of 1976)

3) ಬಾಲ್ಯವಿವಾಹ ಪ್ರತಿಬಂಧಕ (ತಿದ್ದುಪಡಿ) ಕಾಯ್ದೆ 1978
(The civil marriage restrain amendment act of 1978)
ಇಲ್ಲಿ ವಿವಾಹದ ವಯಸ್ಸನ್ನು ಸ್ತ್ರೀಯರಿಗೆ 18 ಮತ್ತು ಪುರುಷರಿಗೆ 21 ಎಂದು ನಿಗಧಿಸಿರುತ್ತದೆ.

4) ಸ್ತ್ರೀಯರ ಅಸಭ್ಯ ಪ್ರತಿನಿಧಿಸುವಿಕೆಯ ನಿಷೇಧ ಕಾಯ್ದೆ 1986
(Indecent Representation of women act 1986)

5) ಕ್ರಿಮಿನಲ್ ಕಾನೂನು ತಿದ್ದುಪಡಿ ಕಾಯ್ದೆ 1983
(The Criminal law amendment act of 1983)

6) ಕುಟುಂಬ ನ್ಯಾಯಾಲಯ ಕಾಯ್ದೆ 1984
(The Family cour act of 1984)

ಈ ರೀತಿ ಹಲವು ಕಾಯಿದೆಗಳ ಮೂಲಕ ಮಹಿಳಾ ಹಕ್ಕುಗಳಿಗೆ ಮಹತ್ತರವಾದ ಸ್ಥಾನ ದೊರೆತೆಂದರೆ ತಪ್ಪಾಗಲಾರದು. ಆದುದರಿಂದಲೇ ವಿಶ್ವಸಂಸ್ಥೆಯು 'ಮಾರ್ಚ್ 8, 1975ನ್ನು ಅಂತರರಾಷ್ಟ್ರೀಯ ಮಹಿಳಾ ವರ್ಷ' ಎಂದು ಸಾರಿತು. ಭಾರತ ಸರ್ಕಾರವು 2001ನೇ ವರ್ಷವನ್ನು 'ಮಹಿಳಾ ಸಶಕ್ತೀಕರಣ ವರ್ಷ' ಎಂದು ಘೋಷಿಸಿದೆ.

ಸ್ವಾತಂತ್ರ್ಯೋತ್ತರ ಕಾಲದಲ್ಲಿ ಭಾರತದ ಸಂವಿಧಾನವು ಕಾನೂನಿನ ಮುಂದೆ ಎಲ್ಲ ನಾಗರಿಕರೂ ಸಮಾನ ಎಂಬ ಭರವಸೆಯನ್ನು ಕೊಟ್ಟಿದೆ. ಸ್ವತಂತ್ರ ಸರ್ಕಾರವು ಮಹಿಳೆಯರ ಏಳಿಗೆಗಾಗಿ ವಿವಿಧ ರೀತಿಯ ನೀತಿಗಳನ್ನು ರಚಿಸಿ ಕಾರ್ಯಯೋಜನೆಯನ್ನು ಕೈಗೊಂಡಿದೆ. ಶಾಸನಗಳು, ಶಿಕ್ಷಣ, ಉದ್ಯೋಗ, ರಾಜಕೀಯ, ಹಕ್ಕುಗಳು ಮತ್ತು ಸವಲತ್ತುಗಳು ಬಗ್ಗೆ ಜಾಗೃತಿ ಇತ್ಯಾದಿಗಳಿಗೆ ಸಂಬಂಧಿಸಿದ ಭಾರತದಲ್ಲಿ ಮಹಿಳೆಯರ ಕೆಲವು ಹಕ್ಕು ಬಾಧ್ಯತೆಗಳು ದಕ್ಕುವಂತಾಗಿದೆ. ಸ್ವಾತಂತ್ರ್ಯಾನಂತರದಲ್ಲಿ ಮಹಿಳೆಯರು ಹೆಚ್ಚು ಹಕ್ಕುಗಳನ್ನು ಪಡೆದಿದ್ದರೂ, ಬಹುಸಂಖ್ಯಾತ ಮಹಿಳೆಯರು ತಮ್ಮ ವಿವಿಧ ಸಾಮಾಜಿಕ, ಆರ್ಥಿಕ, ರಾಜಕೀಯ ಹಕ್ಕುಗಳನ್ನು ಕುರಿತಂತೆ ಇನ್ನೂ ಜಾಗೃತರಾಗಿಲ್ಲ.

ಕೆಲವು ಸಮಾಜ ಸುಧಾರಕರು ಹಾಗೂ ಮಹಿಳೆಯರ ಬೆಂಬಲದಿಂದ, ಸಾಮಾಜಿಕ ಶಾಸನಗಳ ಅಂಗೀಕಾರದಿಂದ ಮಹಿಳೆಯರು ಸಮಾನ ಹಕ್ಕುಗಳಿಗಾಗಿ ತಮ್ಮ ಹೋರಾಟವನ್ನು ನಡೆಸಿ ತಕ್ಕ ಮಟ್ಟಿಗೆ ಯಶಸ್ವಿಯಾಗಿದ್ದಾರೆ. ಆದರೆ ಇದು ದೇಶದ ಎಲ್ಲ ವರ್ಗದ, ವರ್ಣದ ಮಹಿಳೆಯರಿಗೂ ದಕ್ಕಿ ಅವುಗಳ ಉಪಯೋಗ ಪಡೆಯಬೇಕೆಂಬುದು ನಮ್ಮೆಲ್ಲರ ಬಯಕೆಯಾಗಿದೆ. ಅದು ಸಿಗಬೇಕಾದರೆ ಭಾರತೀಯ ಮಹಿಳೆಯಲ್ಲಿ ಜಾಗೃತಿ ಅಗತ್ಯ. ಈ ನಿಟ್ಟಿನಲ್ಲಿ ತಿಳಿಯುವುದಾದರೆ ನಿಜವಾದ ಮಹಿಳಾ ಹಕ್ಕುಗಳು ಯಾವುವು? ಅವು ಯಾವ ರೀತಿ ಆಕೆಗೆ ದೊರಕಬೇಕೆಂಬುದನ್ನು ತಿಳಿಯುವುದೂ ಸಹ ಅಗತ್ಯವಾಗಿದೆ.

**ಮಹಿಳೆಯರ ಹಕ್ಕು ಸಂವಿಧಾನಾತ್ಮಕ ಮತ್ತು ಸಾಮಾಜಿಕವಾಗಿ**

ಒಟ್ಟು ಜನಸಂಖ್ಯೆಯ ಅರ್ಧಭಾಗದಷ್ಟು ಇರುವ ಹಾಗೂ 5ನೇ ಮೂರು ಭಾಗದಷ್ಟು ಅನಕ್ಷರಸ್ಥರಾಗಿರುವ ಮಹಿಳೆಯರು ಅದರ ಸನಾತನ ಮತ್ತು ಸಾಂಪ್ರದಾಯಿಕ ನಂಬಿಕೆಗಳು ಮತ್ತು ಆಚರಣೆಗಳು ಇರುವ ಒಂದು ಸಮಾಜವು ರಾತ್ರಿ ಕಳೆದು ಬೆಳಗಾಗುವುದರಲ್ಲಿ ಬದಲಾಗಲು ಸಾಧ್ಯವಿಲ್ಲ. ಇಂತಹ ಆಚರಣೆಗಳ ವಿರುದ್ಧವೂ ಒಂದು ಬಲವಾದ ಸಾರ್ವಜನಿಕ ಅಭಿಪ್ರಾಯವನ್ನು ಸೃಷ್ಟಿಸುವುದು ಸುಲಭ ಸಾಧ್ಯವೇನಲ್ಲ. ಕಾನೂನು ಕೆಲಮಟ್ಟಿಗೆ ಪ್ರಭಾವ ಬೀರುವುದಾದರೂ ಅದನ್ನು ತುಂಬಾ ಮುಂಜಾಗರೂಕತೆಯಿಂದ ಮತ್ತು ಹಂತ ಹಂತವಾಗಿ ಹೊರತರಬೇಕಾಗುತ್ತದೆ.

ಪುರುಷರಂತೆ ಮಹಿಳೆಯರಿಗೂ ಭಾರತ ಸಂವಿಧಾನವು ಕೊಡಮಾಡಿರುವ ಪ್ರಮುಖ ಹಕ್ಕುಗಳೆಂದರೆ,

1) **ಸಮಾನತೆಯ ಹಕ್ಕು** : ಅಂದರೆ ಅವಕಾಶಗಳ ಸಮಾನತೆ, ಕಾನೂನಿನ ಸಮಾನತೆ, ಕಾಯಿದೆಗಳಿಂದ ಸಮಾನ ರಕ್ಷಣೆ, ಲಿಂಗ ಆಧಾರಗಳ ಮೇಲೆ ಯಾವುದೇ ವ್ಯಕ್ತಿಯ ವಿರುದ್ಧ ತಾರತಮ್ಯವಿಲ್ಲದಿರುವುದು ಮತ್ತು ಲಿಂಗ ಆಧಾರಗಳ ಮೇಲೆ ಸಾರ್ವಜನಿಕ ಉದ್ಯೋಗ ವಿಚಾರಗಳಲ್ಲಿ ತಾರತಮ್ಯವಿಲ್ಲದಿರುವುದು.

2) **ಸ್ವಾತಂತ್ರ್ಯದ ಹಕ್ಕು** : ಅಂದರೆ ವಾಕ್ ಸ್ವಾತಂತ್ರ್ಯ, ಅಭಿವ್ಯಕ್ತಿ ಸ್ವಾತಂತ್ರ್ಯ, ವಾಸ ಮಾಡುವ ಸ್ವಾತಂತ್ರ್ಯ, ವೃತ್ತಿ ಸ್ವಾತಂತ್ರ್ಯ ಮತ್ತು ಚಲನೆ ಸ್ವಾತಂತ್ರ್ಯ.

3) **ಶೋಷಣೆ ವಿರುದ್ಧ ಹಕ್ಕು** : ಯಾವುದೇ ಕ್ಷೇತ್ರದಲ್ಲಾಗಲಿ ಬಲವಂತ ದುಡಿಮೆಯ ವಿರುದ್ಧ ಪ್ರತಿಭಟಿಸುವ ಹಕ್ಕನ್ನು ಹೊಂದಿರುವುದು.

4) **ಧಾರ್ಮಿಕ ಸ್ವಾತಂತ್ರ್ಯದ ಹಕ್ಕು** : ಅಂದರೆ ಧರ್ಮವನ್ನು ಒಪ್ಪಿಕೊಳ್ಳುವುದು, ಆಚರಿಸುವುದು ಮತ್ತು ಬಹಿರಂಗವಾಗಿ ಪ್ರಚಾರಪಡಿಸುವುದು.

5) **ಆಸ್ತಿಯ ಹಕ್ಕು** : ಪಿತ್ರಾರ್ಜಿತವಾದ ಯಾವುದೇ ಆಸ್ತಿಯನ್ನು ಪಡೆಯುವುದು, ಅನುಭೋಗಿಸುವುದು ಮತ್ತು ಪರಬಾರೆ ಮಾಡುವುದು.

6) **ಸಾಂಸ್ಕೃತಿಕ ಮತ್ತು ಶೈಕ್ಷಣಿಕ ಹಕ್ಕು** : ಭಾರತೀಯ ಸಂಸ್ಕೃತಿಯನ್ನು ಪಾಲಿಸುವುದು ಮತ್ತು ಶೈಕ್ಷಣಿಕವಾಗಿ ಯಾವುದೇ ಶಿಕ್ಷಣ ಸಂಸ್ಥೆಯಲ್ಲಿ ಪ್ರವೇಶ ಪಡೆಯುವುದು.

7) **ಸಂವಿಧಾನಬದ್ಧ ಪರಿಹಾರಗಳ ಹಕ್ಕು** : ಅಂದರೆ ಮೂಲಭೂತ ಹಕ್ಕುಗಳಿಗಾಗಿ ಒತ್ತಾಯಪಡಿಸಲು ನ್ಯಾಯಾಲಯಗಳಿಗೆ ಮೊರೆ ಹೋಗುವುದು.

ಈ ಮೂಲಭೂತ ಹಕ್ಕುಗಳ ಮಾತ್ರವಲ್ಲದೆ, ರಾಜ್ಯಗಳು ಮಹಿಳೆಯರಿಗೆ ಮೊದಲ ಆದ್ಯತೆ ನೀಡಲು ಮತ್ತು ಅವರ ಹಿತಾಸಕ್ತಿಗಳನ್ನು ರಕ್ಷಿಸುವುದಕ್ಕಾಗಿ ವಿಶೇಷ ಕಾನೂನುಗಳನ್ನು ಜಾರಿಗೊಳಿಸುವ ಅಧಿಕಾರವನ್ನು ಹೊಂದಿದೆ.

ಭಾರತದ ಮಹಿಳೆಯರು ಇತರ ದೇಶಗಳ ಮಹಿಳೆಯರಿಗಿಂತ ಹೆಚ್ಚಿನ ಹಕ್ಕುಗಳನ್ನು ಹೊಂದಿದ್ದರೂ, ನಮ್ಮ ಮಹಿಳೆಯರು ಈ ಎಲ್ಲ ಹಕ್ಕುಗಳನ್ನು ಕುರಿತು ತಿಳುವಳಿಕೆಯನ್ನು ಹೊಂದಿದ್ದಾರೆಯೇ? ಅವರು ನಿಜವಾಗಿಯೂ ಈ ಹಕ್ಕುಗಳನ್ನು ಅನುಭವಿಸುತ್ತಿದ್ದಾರೆಯೇ? ಹಕ್ಕುಗಳ ಅನುಭೋಗದೊಂದಿಗಿನ ತೃಪ್ತಿಯ ಮಟ್ಟ ಹಾಗೂ ಹಕ್ಕುಗಳ ವಿವಿಧ ಬಗೆಗಳನ್ನು ಕುರಿತು ಜಾಗೃತಿಗೆ ಸಂಬಂಧಿಸಿ ಈ ಕೆಳಗಿನ ಅಂಶಗಳ ವಿಶ್ಲೇಷಣೆ ಮಾಡಿ ಗಮನಿಸಬಹುದು.

## (1) ಸಾಮಾಜಿಕ ಹಕ್ಕುಗಳು :

ಮಹಿಳೆಯರಲ್ಲಿ ವಿವಾಹ ಕಾಯಿದೆಗಳನ್ನು ಕುರಿತು ತಿಳುವಳಿಕೆ ತುಂಬಾ ಕಡಿಮೆ. 100ನೇ ಒಂದು ಭಾಗದಷ್ಟು ಮಹಿಳೆಯರು ಮಾತ್ರ ತಮ್ಮ ಜೀವನ ಸಂಗಾತಿಗಳನ್ನು ತಾವೇ ಆಯ್ಕೆ ಮಾಡಿಕೊಳ್ಳುವ ಹಕ್ಕಿನ ಬಗ್ಗೆ ತಿಳುವಳಿಕೆ ಹೊಂದಿದ್ದರೆ, 5ನೇ ಒಂದು ಭಾಗದಷ್ಟು ಮಹಿಳೆಯರು ವಿವಾಹದ ಸರಿಯಾದ ಕಾನೂನುಬದ್ಧ ವಯಸ್ಸಿನ ಬಗ್ಗೆ ಅರಿವನ್ನು ಹೊಂದಿದ್ದಾರೆ. 5ನೇ ಒಂದು ಭಾಗಕ್ಕಿಂತ ಸ್ವಲ್ಪ ಕಡಿಮೆ ಮಹಿಳೆಯರು ಸ್ವಲ್ಪ ಕಡಿಮೆ ಮಹಿಳೆಯರು ವಿಚ್ಛೇದನದ ನಂತರ ಜೀವನಾಂಶ ಪಡೆಯುವುದರಲ್ಲಿ ಕಾನೂನು ಗೊತ್ತು ಮಾಡುವುದರ ಕುರಿತು ತಿಳುವಳಿಕೆ ಹೊಂದಿದ್ದಾರೆ. 5ನೇ ಒಂದು ಭಾಗಕ್ಕಿಂತ ಕಡಿಮೆ ಮಹಿಳೆಯರು ವಿಧವೆಯರು ಪುನರ್ ವಿವಾಹ ಮಾಡಿಕೊಳ್ಳಲು ಇರುವ ಕಾನೂನು ಸಮ್ಮತ ಹಕ್ಕುಗಳ ಬಗ್ಗೆ ಅರಿವನ್ನು ಹೊಂದಿದ್ದಾರೆ. 5ನೇ ಒಂದು ಭಾಗಕ್ಕಿಂತ ಸ್ವಲ್ಪ ಕಡಿಮೆ ಮಹಿಳೆಯರು ವರದಕ್ಷಿಣೆ ಕಾನೂನಿನ ಕುರಿತು ಪರಿಜ್ಞಾನವನ್ನು ಹೊಂದಿದ್ದಾರೆ. ಈ ಎಲ್ಲ ಅಂಶಗಳನ್ನು ಒಟ್ಟಿಗೆ ತೆಗೆದುಕೊಂಡಾಗ 10ನೇ ಒಂದು ಭಾಗದಷ್ಟು ಮಹಿಳೆಯರು ವಿವಾಹ ಕಾನೂನುಗಳನ್ನು ಕುರಿತು ಕೆಲಮಟ್ಟಿಗೆ ತಿಳುವಳಿಕೆ ಹೊಂದಿದ್ದಾರೆಂದು ಹೇಳಬಹುದು.

1) ಮಹಿಳೆಯರು ಕುಟುಂಬದಲ್ಲಿ ತೀರ್ಮಾನ ತೆಗೆದುಕೊಳ್ಳುವುದರಲ್ಲಿ ಅತಿ ಸಣ್ಣಪಾತ್ರವನ್ನು ನಿರ್ವಹಿಸುತ್ತಿದ್ದಾರೆ. ಗೃಹಜೀವನದ ಪ್ರಮುಖವಲ್ಲದ ವಿಚಾರಗಳಲ್ಲಿ ಮಾತ್ರ ಗಂಡನು ಹೆಂಡತಿಯೊಂದಿಗೆ ಚರ್ಚಿಸುವುದು ಕಂಡುಬಂದಿದೆ.

2) ವೈವಾಹಿಕ ಬಾಂಧವ್ಯ ಎನ್ನುವುದು ಗಂಡ ಹೆಂಡತಿ ನಡುವಿನ ಸಂಬಂಧದಲ್ಲಿ ಅಂತಹ ಎದ್ದು ಕಾಣುವ ಮಹತ್ವವನ್ನು ಸಾಧಿಸಿಲ್ಲ.

3) ಕುಟುಂಬ ತೊಂದರೆಯಲ್ಲಿದ್ದೂ ಮಹಿಳೆಯರು ತಮ್ಮ ಅಂತಸ್ತಿನ ಕಡೆಗೆ ಗಮನ ಕೊಡದೆ ಅದಕ್ಕಿಂತ ಹೆಚ್ಚಾಗಿ ತಮ್ಮ ಜೀವನಾನುಭವ ಸಂತೃಪ್ತಿಯ ಕಡೆಗೆ ಗಮನ ಹರಿಸುತ್ತಾರೆ.

4) 3ನೇ ಎರಡರಷ್ಟು ಮಹಿಳೆಯರು ತಮ್ಮ ವಿವಾಹ ಮತ್ತು ಕುಟುಂಬ ಜೀವನದೊಂದಿಗೆ ಸಂತೃಪ್ತಿಯಿಂದ ಇದ್ದಾರೆ.

5) ಮನೆಗೆಲಸದೊಂದಿಗಿನ ತೃಪ್ತಿಯ ಮಟ್ಟವು ವಯಸ್ಸು, ಶಿಕ್ಷಣ ಮತ್ತು ಆದಾಯಕ್ಕೆ ಸಂಬಂಧಿಸಿ ಬೇರೆ ಬೇರೆಯಾಗಿರುತ್ತದೆ. ಬಡವರಾದ, ಅನಕ್ಷರಸ್ಥರಾದ ಮಹಿಳೆಯರು ಹಾಗೂ ಕಡಿಮೆ ವಿದ್ಯಾವಂತ ಮಹಿಳೆಯರು ಅಲ್ಲದೆ ಮಧ್ಯವಯಸ್ಕ ಮಹಿಳೆಯರು ಶ್ರೀಮಂತರಾದ, ಹೆಚ್ಚು ವಿದ್ಯಾವಂತರಾದ ಹಾಗೂ ಕಿರಿಯ ಮಹಿಳೆಯರಿಗಿಂತ ಹೆಚ್ಚಾಗಿ ಮನೆಗೆಲಸದೊಂದಿಗೆ ತೃಪ್ತಿಯಿಂದ ಇರುತ್ತಾರೆ.

6) ಮಹಿಳೆಯರಲ್ಲಿ ಕೆಲವೇ ಮಂದಿ ಸಾಂಪ್ರದಾಯಿಕ ಮೌಲ್ಯಗಳಿಂದ ಮುಕ್ತರಾಗಿದ್ದಾರೆ.

## (2) ಆರ್ಥಿಕ ಹಕ್ಕುಗಳು :

1) ನಾಲ್ಕನೆ ಒಂದು ಭಾಗದಷ್ಟು ಕಡಿಮೆ ಸಂಖ್ಯೆಯ ಮಹಿಳೆಯರು ತಂದೆಯ ಆಸ್ತಿಯಲ್ಲಿ ಪಾಲು ಪಡೆಯುವ ಹಕ್ಕನ್ನು ಕುರಿತು ತಿಳುವಳಿಕೆ ಹೊಂದಿದ್ದರೆ, 5ನೇ ನಾಲ್ಕು ಭಾಗದಷ್ಟು ಹೆಚ್ಚು ಸಂಖ್ಯೆಯ ಮಹಿಳೆಯರು ಗಂಡನ ಆಸ್ತಿಯಲ್ಲಿ ಪಾಲು ಪಡೆಯುವ ತಿಳುವಳಿಕೆ ಹೊಂದಿದ್ದಾರೆ.

2) ಕಡಿಮೆ ಸಂಖ್ಯೆಯ ಮಹಿಳೆಯರು ಗಂಡನ ಆಸ್ತಿಯನ್ನು ಅನುಭೋಗಿಸುತ್ತಿದ್ದರೆ, ಅವರಲ್ಲಿ ತೀರಾ ಕಡಿಮೆ ಸಂಖ್ಯೆಯ ಮಹಿಳೆಯರು ತಂದೆಯ ಆಸ್ತಿಯಲ್ಲಿ ಪಾಲು ಪಡೆಯುತ್ತಾರೆ.

3) 10ನೇ ಒಂದು ಭಾಗದಷ್ಟು ಮಹಿಳೆಯರು ಮಾತ್ರ ಹಳ್ಳಿಗಳಲ್ಲಿ ಕೆಲಸ ಮಾಡಿ ಸಂಪಾದಿಸುತ್ತಾರೆ ಮತ್ತು ಆರ್ಥಿಕವಾಗಿ ಸ್ವಾತಂತ್ರ್ಯರಾಗಿದ್ದಾರೆ.

5) ದುಡಿಯುವ ಮಹಿಳೆಯರು ಮನೆಗೆಲಸದ ಪಾತ್ರಗಳನ್ನು ಸಕಾರಾತ್ಮಕವಾಗಿ ನಿರ್ವಹಿಸಿದರೆ, ದುಡಿಯಲಾಗದ ಮಹಿಳೆಯರ ಕೂಲಿ ಗಳಿಕೆಯ ಪಾತ್ರವು ಅವರ ಮೇಲೆ ಹೊರೆಯನ್ನು ಹೇರುತ್ತದೆ.

6) ಪ್ರತಿ ಹತ್ತು ದುಡಿಯುವ ಮಹಿಳೆಯರಲ್ಲಿ ಒಂಭತ್ತು ಮಂದಿ ತಮ್ಮ ಗಳಿಕೆ, ವರಮಾನದಿಂದ ತೃಪ್ತರಾಗಿಲ್ಲ. ಕೆಲಸದ ಕಲ್ಪನೆಗಿಂತ ಹೆಚ್ಚಾಗಿ ಅವರು ಮಾಡುವ ಕೆಲಸದ ಸ್ವರೂಪ ಮತ್ತು ಪಡೆಯುವ ವೇತನ ಇವುಗಳ ಕಾರಣದಿಂದ ಈ ಅತೃಪ್ತಿ ಉಂಟಾಗುತ್ತದೆ.

7) ಕುಟುಂಬದ ಆರ್ಥಿಕತೆಗೆ ಕೊಡುಗೆ ನೀಡುವ ಮಹಿಳೆಯರು ತಮ್ಮ ಇಷ್ಟಕ್ಕೆ ತಮ್ಮ ಗಳಿಕೆಯನ್ನು ವೆಚ್ಚ ಮಾಡಲು ಸ್ವತಂತ್ರರಾಗಿರುವುದಿಲ್ಲ.

## (3) ರಾಜಕೀಯ ಹಕ್ಕುಗಳು :

1) 5ನೇ ಒಂದು ಭಾಗಕ್ಕಿಂತ ತುಂಬಾ ಕಡಿಮೆ ಸಂಖ್ಯೆಯ ಮಹಿಳೆಯರು ರಾಜಕೀಯ ಪ್ರಜ್ಞೆಯನ್ನು ಹೊಂದಿದ್ದಾರೆ.

2) ಮತದಾನದ ಹಕ್ಕನ್ನು ಹೊಂದಿರುವ ಮಹಿಳೆಯರಲ್ಲಿ 4ನೇ ಮೂರರಷ್ಟು ಮಹಿಳೆಯರು ಮತವನ್ನು ಚಲಾಯಿಸುತ್ತಾರೆ. ರಾಜಕೀಯದಲ್ಲಿ ನಿಜವಾದ ಆಸಕ್ತಿ ಇರುವುದಕ್ಕಿಂತ ಹೆಚ್ಚಾಗಿ ಸಂತೋಷ ಸಂಚಾರದ ದೃಷ್ಟಿಕೋನವು ಮಹಿಳೆಯರನ್ನು ಮತ ಚಲಾವಣೆಗೆ ಪ್ರೇರೇಪಿಸುತ್ತದೆ ಎಂಬುದು ಗಮನಾರ್ಹ.

3) ಮಹಿಳೆಯರ ಮತದಾನ ವರ್ತನೆಯು ರಾಜಕೀಯ ಚಲನೀಕರಣದೊಂದಿಗಾಗಲಿ ಅಥವಾ ರಾಜಕೀಯ ಸಾಮಾಜೀಕರಣದೊಂದಿಗಾಗಲಿ ....ಳಿತವಾಗಿದೆ. ಅವರ ಗಂಡಂದಿರ ರಾಜಕೀಯ ನಂಬಿಕೆಗಳು ಹಾಗೂ ಮನೋಭಾವಗಳಿಗೆ ಅನುಗುಣವಾಗಿರುತ್ತದೆ.

4) ಕೆಲವೇ ಮಂದಿ ಮಹಿಳೆಯರು ಕೆಲವು ಪಕ್ಷಗಳನ್ನು ಬೆಂಬಲಿಸುವುದನ್ನು ಬಿಟ್ಟರೆ ಎಲ್ಲ ಮಹಿಳೆಯರು ಸಾಮಾನ್ಯವಾಗಿ ಯಾವುದೇ ರಾಜಕೀಯ ಪಕ್ಷದ ಸಕ್ರಿಯ ಸದಸ್ಯರಾಗಿರುವುದಿಲ್ಲ.

ಈ ಮೇಲಿನ ವಿವರಣೆಗಳಿಂದ, ಹಕ್ಕುಗಳನ್ನು ಕುರಿತು ತಿಳುವಳಿಕೆಯು ಮಹಿಳೆಯರ ಸ್ಥಾನಮಾನವನ್ನು ಎತ್ತರಿಸಿಯೂ ಇಲ್ಲ, ಹಾಗೆಯೇ ಹಕ್ಕುಗಳ ಬಗ್ಗೆ ತಿಳುವಳಿಕೆ ಇಲ್ಲದಿರುವುದು ಅವರ ಈಗಿನ ಸ್ಥಾನಮಾನದೊಂದಿಗೆ ತೃಪ್ತಿಯ ಭಾವನೆಯನ್ನು ಕಡಿಮೆ ಮಾಡಿಯೂ ಇಲ್ಲ ಎಂಬುದು ತಿಳಿದು ಬರುತ್ತದೆ. ಹಕ್ಕುಗಳನ್ನು ಕುರಿತು ತಿಳುವಳಿಕೆಗೆ ಅಡ್ಡಿ ಉಂಟುಮಾಡುವ ಮುಖ್ಯ ಸಮಸ್ಯೆಗಳೆಂದರೆ ಅನಕ್ಷರತೆ, ಗೃಹ ಸಂಬಂಧ ಕಾರ್ಯಗಳಲ್ಲಿ ಅತಿಯಾಗಿ ತೊಡಗುವಿಕೆ, ಗೃಹ ಜೀವನದ ನಿರ್ಬಂಧಗಳು ಮತ್ತು ಪುರುಷರ ಮೇಲಿನ ಆರ್ಥಿಕ ಅವಲಂಬನೆ. ಹಕ್ಕುಗಳ ಬಗ್ಗೆ ಮಹಿಳೆಯರಿಗೆ ತಿಳುವಳಿಕೆಯನ್ನು ಉಂಟು ಮಾಡಬೇಕು. ಅಂದರೆ ಪರಿಹಾರ ಕ್ರಮಗಳು ಇವೆ. ಇವುಗಳನ್ನು ಸಹ ಮೂರು ರೀತಿ ಗುರುತಿಸಬಹುದು. ಈ ಸಂಬಂಧವಾಗಿ ಕೆಳಕಂಡಂತೆ ಸ್ವ–ವಿವರವಾಗಿ ತಿಳಿಸಬಹುದು.

**ಪರಿಹಾರ ಕ್ರಮಗಳು :**

ಕುಟುಂಬದಲ್ಲಿ ಪುರುಷರು ಮಹಿಳೆಯರಿಗೆ ಹಕ್ಕುಗಳನ್ನು ನಿರಾಕರಿಸಲು ಹಲವಾರು ಕಾರಣಗಳನ್ನು ಪಟ್ಟಿ ಮಾಡಬಹುದು. ಹಕ್ಕುಗಳು ಸಾಂಸ್ಕೃತಿಕವಾಗಿ ಅನುಮೋದನೆಯಾಗಿರಬಹುದು ಅಥವಾ ಮಹಿಳೆಯರು ತಾವಾಗಿಯೇ ಸಹಿಸಿಕೊಂಡು ಪ್ರತಿಭಟಿಸದೇ ಇರಬಹುದು ಅಥವಾ ಸಾಮಾಜಿಕ ಕಾಯಿದೆಗಳನ್ನು ಉಲ್ಲಂಘನೆ ಮಾಡಿದವರಿಗೆ ಶಿಕ್ಷೆ ನೀಡದೇ ಇರಬಹುದು ಅಥವಾ ಹಕ್ಕುಗಳ ನಿವಾರಣೆಯಿಂದ ಅನುಕೂಲಗಳೇ ಹೆಚ್ಚು ಎನ್ನಿಸಿರಬಹುದು. ಈ ಹಲವಾರು ಕಾರಣಗಳಿಂದ ಆಕೆ ಹಕ್ಕುಗಳ ಬಗ್ಗೆ ಸಂಪೂರ್ಣ ತಿಳುವಳಿಕೆ ಪಡೆಯಲು ಸಾಧ್ಯವಾಗಿಲ್ಲ. ಈ ಸಂಬಂಧ ಕಾನೂನು, ಸಾಮಾಜಿಕ ಹಾಗೂ ಆರ್ಥಿಕ ಪರಿಹಾರ ಕ್ರಮಗಳನ್ನು ಕುರಿತು ತಿಳಿಯಬೇಕು.

## 1. ಕಾನೂನುಬದ್ಧ ಪರಿಹಾರ ಕ್ರಮಗಳು :

ಮಹಿಳೆಯರಿಗೆ ನ್ಯಾಯವಾಗಿ ಸಾರ್ವತ್ರಿಕವಾಗಿ ಮಾನ್ಯ ನೀಡಬೇಕಾಗಿದ್ದು ಅದಕ್ಕೆ ಪೂರಕವಾಗಿ ಮಾನವ ಸೇವೆಯ ವೃತ್ತಿಪರರಲ್ಲ. ಸಕಾಲಿಕ ಕ್ರಮದೊಂದಿಗೆ ಪ್ರತಿಕ್ರಿಯಿಸಬೇಕಾಗಿದೆ. ಸ್ವಾತಂತ್ರ್ಯಾನಂತರ ಮೊದಲ ದಶಕದಲ್ಲಿ ಲಿಂಗ ಅಸಮಾನತೆಯನ್ನು ಒಂದು ಪ್ರಮುಖ ಸಮಸ್ಯೆಯೆಂದು ಪರಿಗಣಿಸಲಾಯಿತಲ್ಲದೆ ಮಹಿಳೆಯರ ಶೋಷಣೆಯನ್ನು ಗುರುತಿಸಲು ಹಾಗೂ ಸೂಕ್ತ ಪರಿಹಾರ ಕ್ರಮಗಳನ್ನು ಕಂಡುಹಿಡಿಯಲು ಹೆಚ್ಚಿನ ಪ್ರಯತ್ನಗಳನ್ನು ನಡೆಸಲಾಯಿತು. 1952 ಮತ್ತು 1962ರ ನಡುವೆ ಮಹಿಳೆಯರ ಸಮಾನತೆಯನ್ನು ಸಾಧಿಸಲು ಅನೇಕ ಕಾಯಿದೆಗಳನ್ನು ವಿನ್ಯಾಸಗೊಳಿಸಲಾಯಿತು. ಅನೇಕ ರಾಜ್ಯ ಕಾಯಿದೆಗಳು ಪುರುಷರಿಗೆ ಸರಿಸಮನಾಗಿ ಮಹಿಳೆಯರು ಎಂಬ ಧ್ಯೇಯವನ್ನು

ಎತ್ತಿಹಿಡಿದಿವೆಯಾದರೂ, ನಿರೀಕ್ಷಿಸಿದಂತೆ ಈ ಕಾಯಿದೆಗಳು ಪೂರ್ಣವಾಗಿ ಜಾರಿಯಾಗಿಲ್ಲ. ಈ ಸಾಮಾಜಿಕ ಕಾಯಿದೆಗಳನ್ನು ಪುನರ್ ವಿಮರ್ಶಿಸುವುದರಲ್ಲಿ ನ್ಯಾಯಾಲಯಗಳ ದೃಷ್ಟಿಕೋನವು ಸಂಪ್ರದಾಯದ ನೆರಳಿನಲ್ಲಿಯೇ ಮುಂದುವರಿಯುತ್ತಿರುವಂತೆ ಕಂಡುಬರುತ್ತದೆ. ಕೆಲವು ಕಾಯಿದೆಗಳು ತಿದ್ದುಪಡಿಗೊಂಡಿರುವುದರಿಂದ ಮಹಿಳೆಯ ಮೇಲೆ ದೌರ್ಜನ್ಯ ನಡೆಸಿದ ಪುರುಷನನ್ನು ಬಂಧಿಸಲು ಪೋಲಿಸರು ಕಾಯುತ್ತಿರಬೇಕಾಗಿಲ್ಲ. ದೂರು ನೀಡಬೇಕಾದ ಮಹಿಳೆಯರು ದೂರು ನೀಡದೆ ಅಥವಾ ಮೊದಲ ಯತ್ನದಲ್ಲಿ ಕೊಟ್ಟ ದೂರನ್ನು ಹಿಂತೆಗೆದುಕೊಳ್ಳುವ ಅಥವಾ ಕೈ ಬಿಡುವ ಅಸಂಖ್ಯಾತ ದೃಷ್ಟಾಂತಗಳನ್ನು ಪೋಲೀಸ್ ಅಧಿಕಾರಿಗಳು ನಮೂದಿಸುತ್ತಾರೆ. ಇದರ ಪರಿಣಾಮವಾಗಿ ಪೋಲೀಸರಾಗಲಿ, ಪ್ರಾಸಿಕ್ಯೂಟರ್‌ಗಳಾಗಲಿ ಪಿತ್ರಾರ್ಜಿತ ಆಸ್ತಿಯಲ್ಲಿ ತನಗೆ ಪಾಲು ಕೊಡಲು ನಿರಾಕರಿಸಿದ ತಮ್ಮ ಅಣ್ಣ ತಮ್ಮಂದಿರ ವಿರುದ್ಧ ಅಥವಾ ತಮ್ಮ ಅಭಿಲಾಷೆಗೆ ವಿರುದ್ಧವಾಗಿ ವಿವಾಹ ಮಾಡಿದ ತಂದೆಯ ವಿರುದ್ಧ, ಅಷ್ಟೇ ಅಲ್ಲದೆ ಗರ್ಭಪಾತ ಮಾಡಿಸಿಕೊಳ್ಳಲು ಬಲತ್ಕಾರಿಸಿದ ತಮ್ಮ ಗಂಡಂದಿರ ವಿರುದ್ಧ ಕಾನೂನು ಕ್ರಮ ಕೈಗೊಳ್ಳುವಂತೆ ಶೋಷಿತ ಮಹಿಳೆಯರಿಗೆ ಸಲಹೆ ಮಾಡುವುದಿಲ್ಲ. ಆದ್ದರಿಂದ ಕಾನೂನಿನ ಜೊತೆಗೆ ಮಹಿಳೆಯ ಸಹಕಾರವೂ ಅತ್ಯಂತ ಅಗತ್ಯ. ಸಂಘಟಿತ ಮಹಿಳಾ ಸಮುದಾಯಗಳು ಅಥವಾ ಸ್ವಯಂ ಸೇವಾ ಸಂಘಟನೆಗಳು ಕಾನೂನು ಪರಿಹಾರ ಕ್ರಮಗಳ ಮೂಲಕ ಮಹಿಳೆಯರು ರಕ್ಷಣೆಯನ್ನು ಪಡೆಯಲು ಸಹಾಯ ಮಾಡಬೇಕಾಗಿದೆ.

## 2. ಸಾಮಾಜಿಕ ಪರಿಹಾರ ಕ್ರಮಗಳು :

ಮಹಿಳಾ ಹಕ್ಕುಗಳನ್ನು ಆಕೆ ಪಡೆಯಬೇಕಾದರೆ ಸಾಮಾಜಿಕ ನೆಲೆಯಿಂದಲೂ ಕೆಲವು ಪರಿಹಾರಗಳಿವೆ. ಮಹಿಳಾ ಕಲ್ಯಾಣ ಸೇವೆಗಳು, ಸ್ವಯಂ ಸೇವಾ ಸಂಘಟನೆಗಳ ಸ್ಥಾಪನೆಗೆ ಉತ್ತೇಜನ ಮತ್ತು ಪ್ರಚಾರ ಮಾಧ್ಯಮಗಳ ಮೂಲಕ ಸಾಕ್ಷರತೆ ಇವುಗಳನ್ನು ಸಾಮಾಜಿಕ ಪರಿಹಾರ ಕ್ರಮಗಳು ಒಳಗೊಂಡಿವೆ. ಸೇವೆಗಳಿಗೆ ಅಗತ್ಯವಿರುವ ಮಹಿಳೆಯರನ್ನು ಸ್ವಯಂಸೇವಾ ಸಂಘಟನೆಗಳು ಗುರುತಿಸಬೇಕು. ದೌರ್ಜನ್ಯಕ್ಕೊಳಗಾದ ಮಹಿಳೆಯರ ಪ್ರಕರಣಗಳನ್ನು ನೆರೆಹೊರೆಯವರು ಮಾನವ ಸೇವಾ ಸಂಸ್ಥೆಗಳಿಗೆ ವರದಿ ಮಾಡಬೇಕು.

ಸಾರ್ವಜನಿಕ ಶಿಕ್ಷಣ ಮತ್ತು ಜಾಗೃತಿ ಕಾರ್ಯಕ್ರಮಗಳು ಗಂಭೀರವಾಗಿ ತಮಗೆ ಸಲ್ಲಬೇಕಾದ ನ್ಯಾಯವನ್ನು ಪಡೆಯಲು ಮಹಿಳೆಯರಿಗೆ ಸಹಾಯ ಮಾಡುತ್ತವೆ ಮತ್ತು ತಮಗೆ ಸಲ್ಲಬೇಕಾದ ಹಕ್ಕುಗಳನ್ನು ಮರಳಿ ಪಡೆಯಲು ಸಾಮಾಜಿಕ ಕಾರ್ಯಕರ್ತರು ಮತ್ತು ಮಹಿಳಾ ಸಂಘಟನೆಗಳ ನೆರವು ಪಡೆಯುವುದಕ್ಕೆ ಮಹಿಳೆಯರಿಗೆ ಸಹಾಯ ಮಾಡುತ್ತವೆ. ಮಹಿಳಾ ಕಲ್ಯಾಣ ಮಂಡಲಿಗಳು ಅನ್ಯಾಯಕ್ಕೆ ಒಳಗಾದ ಮಹಿಳೆಯರ ಸಮಸ್ಯೆಗಳಿಗೆ ತುರ್ತಾಗಿ ಪರಿಣಾಮಕಾರಿಯಾಗಿ ಸ್ಪಂದಿಸಲು ಸಮರ್ಥವಾಗಬೇಕಲ್ಲದೆ ಅನ್ಯಾಯ ಮತ್ತು ದುರುಪಯೋಗಗಳ ಕೇವಲ ಚಿಹ್ನೆಗಳಷ್ಟೇ ಅಲ್ಲದೆ ಕಾರಣಗಳನ್ನು ಪರಿಶೀಲಿಸಬೇಕು. ಪುರುಷರೂ ಸಹ ಬದಲಾದ ಕಾಲಗಳಿಗೆ ತಕ್ಕಂತೆ ತಮ್ಮ ಹೊಸ ಪಾತ್ರಗಳನ್ನು ಅರ್ಥಮಾಡಿಕೊಳ್ಳಲು ಪ್ರಯತ್ನಿಸಬೇಕಲ್ಲದೆ ಕುಟುಂಬ ಜೀವನ ಮತ್ತು ಮನೆಗೆಲಸಕ್ಕೆ ಮತ್ತು ಸ್ವತಃ ಕೊಡುಗೆಯ ಅಗತ್ಯವನ್ನು ಮನವರಿಕೆ ಮಾಡಿಕೊಳ್ಳಬೇಕು.

## 3. ಆರ್ಥಿಕ ಪರಿಹಾರ ಕ್ರಮಗಳು :

ಮಹಿಳೆಯರ ಶಿಕ್ಷಣ ಮತ್ತು ವೃತ್ತಿ ತರಬೇತಿಗಳು ಅವರಿಗೆ ಉದ್ಯೋಗಗಳನ್ನು ಪಡೆಯಲು ಉತ್ತೇಜನ ನೀಡುವುದಲ್ಲದೆ ಅವರನ್ನು ಆರ್ಥಿಕವಾಗಿ ಸ್ವತಂತ್ರರನ್ನಾಗಿ ಮಾಡುತ್ತವೆ. ಆರ್ಥಿಕ ಸ್ವಾತಂತ್ರ್ಯವು ಅವರ ಹೊರೆಯನ್ನು ತಗ್ಗಿಸಿ, ಅವರ ಮೌಲ್ಯಗಳನ್ನು ಮತ್ತು ನಂಬಿಕೆಗಳಲ್ಲಿ ಮೂಲಭೂತ ಬದಲಾವಣೆಗಳನ್ನು ತರುವುದಲ್ಲದೆ ತಮ್ಮ ಹಕ್ಕುಗಳಿಗಾಗಿ ಎದ್ದು ನಿಂತು ಬೇಡಿಕೆಗಳಿಗೆ ಒತ್ತಾಯಿಸಲು ಅವರನ್ನು ಸಾಕಷ್ಟು ಧೈರ್ಯಶಾಲಿಗಳನ್ನಾಗಿ ಮಾಡುತ್ತದೆ.

ಮಹಿಳೆಯರು ತಮ್ಮ ಕುಟುಂಬಗಳನ್ನು ಮತ್ತು ಸ್ವತಃ ತಮ್ಮ ಜೀವನದ ಪರಿಸ್ಥಿತಿಗಳನ್ನು ಉತ್ತಮವಾಗಿ ರೂಪಿಸಿಕೊಳ್ಳಲು ಅವರಿಗೆ ಸಂಪನ್ಮೂಲಗಳ ಸಹಾಯ ಒದಗಿಸುವುದು ಅಗತ್ಯ. ನಮ್ಮ ಸಮಾಜದಲ್ಲಿನ ಮಹಿಳೆಯರಿಗಾಗಿ ಎಲಿಸ್ ಬೌಲ್ಡಿಂಗ್‌ರವರು ಸಲಹೆ ಮಾಡಿರುವ ಹತ್ತು ಸಂಪನ್ಮೂಲಗಣನ್ನು ಇಲ್ಲಿ ಉಲ್ಲೇಖಿಸಬಹುದು. ಮಹಿಳೆಯರ ದಿನನಿತ್ಯದ ಹೊರೆ ಕೆಲಸಗಳನ್ನು ಕಡಿಮೆ ಮಾಡಲು ಮತ್ತು ದೈಹಿಕ ಶ್ರಮವನ್ನು ಉಳಿಸಲು ತಂತ್ರಜ್ಞಾನ ಸಂಬಂಧ ಉಪಕರಣಗಳ ಉಪಯೋಗ, ಪ್ರಾಥಮಿಕ ಸಮುದಾಯ ಸೌಲಭ್ಯಗಳು, ಹುಡುಗಿಯರಿಗೆ ಶಾಲೆಗಳಿಗೆ ಸೇರಲು, ಶಿಕ್ಷಣ ಮತ್ತು ತರಬೇತಿ ಪಡೆಯಲು ಉತ್ತೇಜನ, ಅನೌಪಚಾರಿಕ ಶಿಕ್ಷಣ, ಮಹಿಳೆಯರಿಗೆ ತರಬೇತಿ ನೀಡಲು ವಿಶೇಷ ತಜ್ಞರು, ಅರೆವೃತ್ತಿ ತರಬೇತಿಯ ಅವಕಾಶಗಳು, ಸಾಲಸೌಲಭ್ಯಗಳು, ಹಕ್ಕುಗಳಿಗೆ ಕಾನೂನು ರಕ್ಷಣೆ, ಸ್ವಯಂ ಸೇವಾ ಸಂಘಟನೆಗಳು ಮತ್ತು ವಿವಿಧ ಮಟ್ಟಗಳಲ್ಲಿ ಪ್ರಮುಖ ಹುದ್ದೆಗಳಲ್ಲಿ ಮಹಿಳೆಯರನ್ನು ಇರಿಸುವಂತಹ ಕಾರ್ಯಕ್ರಮಗಳು.

ಸಂವಿಧಾನವೇ ಲಿಂಗ ಸಮಾನತೆಯನ್ನು ಒಂದು ಮೂಲಭೂತ ಹಕ್ಕು ಎಂದು ಘೋಷಿಸಿದೆ. ಕೇಂದ್ರ ಹಾಗೂ ರಾಜ್ಯ ಸರ್ಕಾರಗಳು ಸಹ ಮಹಿಳೆಯರ ಕೆಳಸ್ಥಾನಮಾನಕ್ಕೆ ಕಾರಣಗಳನ್ನು ಅಧ್ಯಯನ ಮಾಡಲು ಮತ್ತು ವಿವಿಧ ಕ್ಷೇತ್ರಗಳಲ್ಲಿ ಅವರು ಹಕ್ಕುಗಳನ್ನು ರಕ್ಷಿಸುವುಕ್ಕಾಗಿ ಅನೇಕ ಆಯೋಗಗಳನ್ನು ನೇಮಕ ಮಾಡಿದವು. ಅಂತಹ ಎರಡು ಪ್ರಮುಖ ಆಯೋಗಗಳು ಕೇಂದ್ರ ಸರ್ಕಾರದಿಂದ 1971 ಮತ್ತು 1992ರಲ್ಲಿ ನೇಮಕವಾದವು. ಮಹಿಳೆಯರಿಗೆ ಸಂಬಂಧಿಸಿದ 32 ವಿಚಾರಗಳನ್ನು ಒಳಹೊಕ್ಕು ನೋಡಲು, ಮಹಿಳೆಯರ ಹಕ್ಕುಗಳನ್ನು ಕುರಿತು ವಿಚಾರಣೆ ನಡೆಸಲು, ವಿವಿಧ ಶಾಸನಗಳನ್ನು ಅಧ್ಯಯನ ಮಾಡಲು ಕಂದರಗಳನ್ನು ಮತ್ತು ಅಂತರಗಳನ್ನು ನಮೂದಿಸಲು, ಮಹಿಳೆಯರ ವಿರುದ್ಧ ದೌರ್ಜನ್ಯ ಹಾಗೂ ತಾರತಮ್ಯಗಳ ಕಾರಣಗಳನ್ನು ತಿಳಿದುಕೊಳ್ಳಲು ಹಾಗೂ ಅಗತ್ಯ ಪರಿಹಾರ ಕ್ರಮಗಳನ್ನು ವಿಶ್ಲೇಷಿಸಲು ರಾಷ್ಟ್ರೀಯ ಮಹಿಳಾ ಆಯೋಗವನ್ನು ಜನವರಿ 31, 1992ರಲ್ಲಿ ಸ್ಥಾಪಿಸಲಾಯಿತು. ಈ ರೀತಿ ಮಹಿಳಾ ಹಕ್ಕುಗಳ ಬಳಕೆಗೆ ನಗರ ಪ್ರದೇಶಗಳಲ್ಲಿ ಹಕ್ಕುಗಳನ್ನು ಕುರಿತು ಮಹಿಳೆಯರಲ್ಲಿ ಅರಿವು ಮೂಡಿಸುವುದಕ್ಕಿಂತ ಭಿನ್ನವಾದ ರೀತಿಯಲ್ಲಿ ಗ್ರಾಮೀಣ ಪ್ರದೇಶಗಳಲ್ಲಿ ಮಹಿಳಾ ಹಕ್ಕುಗಳು ಕುರಿತು ಮಹಿಳೆಯರಲ್ಲಿ ಜಾಗೃತಿ ಮೂಡಿಸುವ ಯೋಜನೆ ಮತ್ತು ದೃಷ್ಟಿಕೋನಗಳು ಅಗತ್ಯವಾಗಿದೆ. ಇಲ್ಲವಾದಲ್ಲಿ ಕುಟುಂಬ ಮತ್ತು ರಕ್ತ ಸಂಬಂಧ ವ್ಯವಸ್ಥೆಗಳು ಪಿತೃಪ್ರಾಧಾನ್ಯತೆ ತತ್ವವನ್ನು ಬೆಳೆಸಲು ಸಮಂಜಸವಾದ ನೆಲೆ ಕಲ್ಪಿಸಿವೆ. ಈ ಪಿತೃಪ್ರಧಾನ್ಯತೆ ತತ್ವವು ಮಹಿಳೆಯ ಪುರುಷ ಅಧೀನತೆಯನ್ನು ವಿವರಸಲೆತ್ನಿಸುವುದು.

ಇತಿಹಾಸ ಮತ್ತು ಸಾಮಾಜಿಕ, ರಾಜಕೀಯ ಚಲನಶೀಲತೆಯನ್ನು ಪರಾಮರ್ಶಿಸಿದಾಗ ಲಿಂಗ ಅಸಮಾನತೆಗಳು ವ್ಯಾಪಕವಾಗಿವೆ. ಇವು ಈ ಹಿಂದೆ ಶತಮಾನಗಳ ಕಾಲದಿಂದಲೂ ಬದಲಾಗಿಲ್ಲ. ಆರೋಗ್ಯ, ಶಿಕ್ಷಣ, ಉದ್ಯೋಗ

ಎಲ್ಲದರಲ್ಲೂ ಲಿಂಗ ಅಂತರಗಳಿವೆ. ಅಲ್ಲದೆ ಮಹಿಳೆಯ ವಿಶೇಷ ಅಗತ್ಯಗಳನ್ನು ಪೂರೈಸುವ ಬದಲಿಗೆ ಮುಂದೂಡಲಾಗಿದೆ. ಇಲ್ಲವೆ ಕ್ಷುಲ್ಲಕತೆ ಎಂದು ಕಡೆಗಣಿಸಲಾಗಿದೆ. ಇದಕ್ಕೆ ಕಾರಣ ಹುಡುಕ ಹೊರಟರೆ ಮಹಿಳೆಯನ್ನೇ ಹೊಣೆಗಾರಳನ್ನಾಗಿ ಮಾಡಬೇಕೆನ್ನಿಸುತ್ತದೆ. ಹೇಗೆಂದರೆ–

ಮಕ್ಕಳನ್ನು ಹಡೆಯುವ ಮತ್ತು ಲಾಲನೆ ಪಾಲನೆ ಮಾಡುವ ಜವಾಬ್ದಾರಿಯಿಂದ ತಪ್ಪಿಸಿಕೊಳ್ಳಲಾಗದೆ ಮಹಿಳೆಯು ತನ್ನ ಅಧಿಕಾರಗಳನ್ನು ಪುರುಷನಿಗೆ ಬಿಟ್ಟುಕೊಟ್ಟಳೆ? ಮಾತೃತ್ವ ಆಕರ್ಷಣೆ ಸರ್ವತ್ಯಾಗಕ್ಕೂ ಹೆಣ್ಣನ್ನು ಸಜ್ಜುಗೊಳಿಸುವದೇ? ಹೆಣ್ಣು ದೈಹಿಕವಾಗಿ ಪುರುಷನಿಗೆ ಹೋಲಿಸಿದಂತೆ ಸ್ವಲ್ಪ ದುರ್ಬಲಳಾದ್ದರಿಂದ ಹೆಣ್ಣು ಗಂಡಿನ ನಡುವಣ ಅಧಿಕಾರದ ಮೇಲಾಟದಲ್ಲಿ ಹೆಣ್ಣು ಸೋತು ಸುಣ್ಣವಾದಳೇ? ಈ ಕಾರಣಗಳೇ ಮುಖ್ಯವಾದರೂ ಪುರುಷ ಪ್ರಧಾನ ಕುಟುಂಬ ವ್ಯವಸ್ಥೆಯ ಸಾಮಾಜೀಕರಣದಿಂದ ಅವಳ ಹಕ್ಕುಗಳನ್ನು ಅನುಭೋಗಿಸಲು ಸಾಧ್ಯವಾಗುತ್ತಿಲ್ಲವೆಂದರೆ ತಪ್ಪಾಗಲಾರದು.

**ಅಂತಾರಾಷ್ಟ್ರೀಯ ಮಾನವ ಹಕ್ಕುಗಳ ಕಾನೂನಿನಲ್ಲಿ ಮಹಿಳೆ**

**(Women in International Human rights law)**

ಮಹಿಳೆಯ ಆರ್ಥಿಕ ಮತ್ತು ಸಾಮಾಜಿಕ ಅಭಿವೃದ್ಧಿ, ಪ್ರಜಾಸತ್ತಾತ್ಮಕ ಮತ್ತು ಆರ್ಥಿಕ ಪಾಲ್ಗೊಳ್ಳುವಿಕೆ ಭೌತಿಕ ಮತ್ತು ಸಾಂಸ್ಕೃತಿಕ ಸುರಕ್ಷೆ ಹಾಗೂ ಮಹಿಳೆಯ ಘನತೆ, ಗೌರವ ರಕ್ಷಣೆ ಕುರಿತು ಅಂತರ–ರಾಷ್ಟ್ರೀಯ ಮಾನವ ಹಕ್ಕುಗಳ ಕಾನೂನು ವಿವರಿಸುತ್ತದೆ. ಮಹಿಳೆಯರ ವಿರುದ್ಧದ ಶೋಷಣೆ ಮತ್ತು ತಾರತಮ್ಯಗಳನ್ನು ನಿರ್ಮೂಲನ ಮಾಡುವುದೇ ಕಾನೂನಿನ ಉದ್ದೇಶವಾಗಿದೆ.

ಮಾನವ ಹಕ್ಕುಗಳ ಕಾನೂನು ತಾರತಮ್ಯರಹಿತತೆ ಕುರಿತು ಸಾಮಾನ್ಯ ನಿಯಮವು ಆಧರಿಸಿದೆ. ಹೀಗಾಗಿ ಈ ಕಾನೂನಿನ ಪ್ರಕಾರ ದೇಶವೊಂದರ ಎಲ್ಲಾ ಪ್ರಜೆಗಳೂ ಏಕರೀತಿಯ ಸಮಾನವಾದ ಮಾನವ ಹಕ್ಕುಗಳನ್ನು ಹೊಂದಿರುತ್ತಾರೆ.

**ಅಭಿವೃದ್ಧಿ ಹಕ್ಕಿನ ಲಿಂಗ ವಿಶ್ಲೇಷಣೆ**

**(Gender Analysis of right to development)**

ಅಭಿವೃದ್ಧಿ ಹಕ್ಕು ಪರಿಭಾವನೆಗೆ ಲಿಂಗ ವಿಶ್ಲೇಷಣೆ ಅವಶ್ಯವೆಂದು ಮಾನವ ಹಕ್ಕುಗಳ ಆಯೋಗ, ವಿಶ್ವಸಂಸ್ಥೆಯ ಸಾಮಾನ್ಯ ಸಭೆಯ ನಡಾವಳಿಗಳಲ್ಲಿ, ಮುಕ್ತ ಅಧ್ಯಯನ ಕಾರ್ಯ ತಂಡ ಮತ್ತು ಅಭಿವೃದ್ಧಿ ಹಕ್ಕು ಕುರಿತ ಸ್ವತಂತ್ರ ತಜ್ಞನ ವರದಿಗಳಲ್ಲಿ ಒತ್ತಿ ಹೇಳಲಾಗಿದೆ.

ಅಭಿವೃದ್ಧಿ ಹಕ್ಕಿಗ ಸಂಬಂಧಿಸಿದಂತೆ ಮಾನವ ಹಕ್ಕುಗಳ ಆಯೋಗದ ಅನೇಕ ಗೊತ್ತುವಳಿಗಳು ಕೆಳಕಂಡ ಅಂಶಗಳನ್ನು ಒತ್ತಿ ಹೇಳಿವೆ. ಅವುಗಳಿಗೆ ಮಾನವ ಹಕ್ಕುಗಳ ಆಯೋಗವು ತನ್ನ ಬದ್ಧತೆಯನ್ನು ಸಾರಿದೆ.

1) ಅಭಿವೃದ್ಧಿ ಹಕ್ಕನ್ನು ಜಾರಿಗೊಳಿಸಲು ಲಿಂಗ ದೃಷ್ಟಿಕೋನವನ್ನು ಅಳವಡಿಸಿಕೊಳ್ಳುವ ಅಗತ್ಯವಿದೆ.

2) ಸಮಾಜದ ಎಲ್ಲಾ ಕ್ಷೇತ್ರಗಳಲ್ಲೂ ಸಮಾನತೆ ನೆಲೆಯಲ್ಲಿ ಪೂರ್ಣಪ್ರಮಾಣದಲ್ಲಿ ಮಹಿಳೆಯರು ಪಾಲುಗೊಳ್ಳುವುದು ಅವಶ್ಯ. ಇದರಿಂದ ಅಭಿವೃದ್ಧಿಯನ್ನು ಉತ್ತೇಜಿಸಬಹುದು. ಇದಕ್ಕಾಗಿ ಮಹಿಳಾ ಸಬಲೀಕರಣ ಅವಶ್ಯ.

3) ಬಡತನ, ಹಸಿವು ಮತ್ತು ರೋಗರುಜಿನಗಳನ್ನು ನಿವಾರಿಸಲು ಮತ್ತು ಸ್ವ-ಪೋಷಿತ ಅಭಿವೃದ್ಧಿಯನ್ನು ಉತ್ತೇಜಿಸಲು ಪರಿಣಾಮಕಾರಿ ವಿಧಾನಗಳಾಗಿ ಲಿಂಗ ಸಮಾನತೆ ಮತ್ತು ಮಹಿಳಾ ಸಬಲೀಕರಣವನ್ನು ಉತ್ತೇಜಿಸುವುದು ಅವಶ್ಯ.

**ಆರ್ಥಿಕಾಭಿವೃದ್ಧಿ ಪಡೆಯುವ ಹಕ್ಕುಗಳು :**

ಈ ಬಗ್ಗೆ ಮೊದಲು ಪ್ರತಿಪಾದಿಸಿದ್ದು ವಿಶ್ವಬ್ಯಾಂಕು (1979). ಆರ್ಥಿಕಾಭಿವೃದ್ಧಿ ಕ್ರಿಯೆಯಲ್ಲಿ ಮಹಿಳೆಯರು ಉತ್ಪಾದಕಳಾಗಿ/ಸಂಘಟನಾಕಾರಳಾಗಿ ಮತ್ತು ಕಾರ್ಮಿಕಳಾಗಿ ಉತ್ಪಾದಕವಾಗಿ, ಅರ್ಥಪೂರ್ಣವಾಗಿ ಪಾಲುಗೊಳ್ಳುವ ಹಕ್ಕುಗಳನ್ನು ಪಡೆದಳು. ಆ ನೆಲೆಯಲ್ಲಿ ಮಹಿಳೆ 'ಆರ್ಥಿಕ' ಅಥವಾ ಲಾಭದಾಯಕವಾದ ಚಟುವಟಿಕೆಗಳಲ್ಲಿ ತೊಡಗಿಕೊಳ್ಳಬೇಕು. ಇದರಿಂದ ಆಕೆಯು ಕ್ರಿಯಾತ್ಮಕ ಚಟುವಟಿಕೆ ಹಾಗೂ ಲಾಭದಾಯಕ ಶ್ರಮವನ್ನು ಹೊಂದಲು ಸಾಧ್ಯ. ಸ್ವ-ಉದ್ಯೋಗದ ಪರಿಭಾವನೆಯನ್ನು ಬೆಳೆಸಿಕೊಳ್ಳುತ್ತಾಳೆ. ಜೊತೆಗೆ ಬಡತನ ನಿವಾರಣೆ ಮತ್ತು ಕುಟುಂಬದ ಆರ್ಥಿಕ ಏಳ್ಗೆಗೆ ಗಣನೀಯವಾದ ಸೇವೆ ಗೈಯುತ್ತಾಳೆ. ಇದು ಮಹಿಳಾ ಸಬಲೀಕರಣಕ್ಕೆ ಸಹಕಾರಿಯಾಗುತ್ತದೆ.

**ಕುಟುಂಬದ ಹಕ್ಕುಗಳು :**

ಕುಟುಂಬವೊಂದು ಸಾಮಾಜಿಕ ಘಟಕವಾಗಿ ಅದರ ಸದಸ್ಯರಿಗೆ ನೀಡುವ ರಕ್ಷಣೆ ಸೌಲಭ್ಯಗಳು ಎಂದರ್ಥ. ಕುಟುಂಬ, ಘನತೆ, ಗೌರವ, ಸ್ಥಿರತೆ, ಏಕತೆ, ಸಮಗ್ರತೆ ಸಾಮಾಜಿಕ ಮತ್ತು ಸಾಂಸ್ಕೃತಿಕ ಹಕ್ಕುಗಳಾಗಿವೆ. ಆದಾಯ ಗಳಿಕೆ ಅಗತ್ಯ ಉದ್ಯೋಗದ ಹಕ್ಕನ್ನು ಕನಿಷ್ಠ ಜೀವನಾವಶ್ಯಕತೆಗಳನ್ನು ಪೂರೈಸಿಕೊಳ್ಳುವ ಹಕ್ಕು ಎಲ್ಲವೂ ಕುಟುಂಬದ ಆರ್ಥಿಕ ಹಕ್ಕುಗಳಾಗಿವೆ. ಮಕ್ಕಳು ಮತ್ತು ಗೃಹಿಣಿಯ ಅಗತ್ಯಗಳನ್ನು ಪೂರೈಸುವುದು ತಂದೆ/ಪತಿಯ ಕರ್ತವ್ಯವಾಗುವುದು. ಈ ರೀತಿ ಕೌಟುಂಬಿಕ ನೆಲೆಯಲ್ಲಿ ಆಕೆಗೆ ಹಕ್ಕುಗಳು ಕಾರ್ಯಯೋಜಿತವಾಗಬೇಕು. ಆದರೆ ಇಂದು ಕುಟುಂಬದೊಳಗೆ ಸ್ವತಃ ತಂದೆ-ತಾಯಿಗಳೇ ತಮ್ಮ ಸ್ವಂತ ಮಕ್ಕಳ ನಡುವೆ ಲಿಂಗಾಧಾರದಲ್ಲಿ ಬೇಧಭಾವವೆಣಿಸುವುದು, ಹೆಣ್ಣು ಮಕ್ಕಳಿಗೆ ಉತ್ತಮ ಶಿಕ್ಷಣವನ್ನು ನೀಡದಿರುವುದು ಅಥವಾ ಸಾಮಾನ್ಯ ಶಿಕ್ಷಣ ನೀಡುವುದು, ಹೆಣ್ಣು ಮಕ್ಕಳಿಗೆ ಉದ್ಯೋಗಕ್ಕೆ ಆದ್ಯತೆ ಮತ್ತು ಮಹತ್ವ ನೀಡದಿರುವುದು; ವಿವಾಹ, ನಿವಾಸ, ವಸ್ತ್ರ ವಿನ್ಯಾಸ, ಆಭರಣ ಮುಂತಾದ ವಿಷಯಗಳಲ್ಲಿ ಆಕೆಗೆ ಯಾವುದೇ ನೈತಿಕ ಹಕ್ಕುಗಳನ್ನು ಕಲ್ಪಿಸಿಕೊಡದಿರುವುದನ್ನು ಇಂದಿಗೂ ಸಹ ಕಾಣಬಹುದು.

**ಮಾನವ ಹಕ್ಕುಗಳಲ್ಲಿ ನಾರಿಯರ ಹಕ್ಕುಗಳ ಮಂಡನೆ :**

ಸ್ತ್ರೀ–ಪುರುಷರ ಸಮಾನ ಹಕ್ಕುಗಳ ತತ್ವವು ಮಾನವ ಹಕ್ಕುಗಳ ಸಾರ್ವತ್ರಿಕ ಘೋಷಣೆಯಲ್ಲಿ ಸೇರಿಸಲಾಗಿದೆ. ಮಾನವ ಹಕ್ಕುಗಳಿಗಿಂತ ಮಹಿಳಾ ಹಕ್ಕುಗಳು ಸಂಪೂರ್ಣವಾಗಿ ವಿಭಿನ್ನವೇನೂ ಅಲ್ಲ. ಈ ಅರ್ಥದಲ್ಲಿ ಮಹಿಳಾ ಹಕ್ಕುಗಳೂ ಮಾನವ ಹಕ್ಕುಗಳಂತೆ ಸಾಮಾಜಿ, ಆರ್ಥಿಕ, ಸಾಂಸ್ಕೃತಿಕ, ರಾಜಕೀಯ ಮತ್ತು ನಾಗರೀಕ ನೆಲೆಗಟ್ಟುಗಳನ್ನು ಮತ್ತು ಆಯಾಮಗಳನ್ನು ಹೊಂದಿವೆ. ಲಿಂಗಾಧಾರದಲ್ಲಿ ಮಹಿಳೆ ವಿರುದ್ಧ ಮಾನವ ಹಕ್ಕುಗಳನ್ನು ಅನುಭವಿಸಲು, ಚಲಾಯಿಸಲು ಅಧಿಕ ಆತಂಕಗಳಿರಬಾರದೆನ್ನುವುದೇ ಮಹಿಳಾ ಹಕ್ಕುಗಳ ಲಿಂಗ ನಿರ್ದಿಷ್ಟತೆಯಾಗಿದೆ. ಮಾನವ ಹಕ್ಕುಗಳನ್ನು ಅನುಭವಿಸಲು ಮಹಿಳೆ ಎನ್ನುವ ನೆಲೆಯಲ್ಲಿ ತಾರತಮ್ಯಗಳು ಏರ್ಪಡಬಾರದು. ಈ ದಿಸೆಯಲ್ಲಿ ಅಂತರರಾಷ್ಟ್ರೀಯ ಮಾನವ ಹಕ್ಕುಗಳ ವಿಧೇಯಕ ಪತ್ರದಲ್ಲಿ ಈ ಕೆಳಗಿನ ನಾರಿಯರ ಹಕ್ಕುಗಳನ್ನು ಹೇಳಿದ್ದಾರೆ.

1) ನಾರಿಯರ ವಿರುದ್ಧ ಎಲ್ಲ ಸ್ವರೂಪಗಳ ತಾರತಮ್ಯವನ್ನು ನಿರ್ಮೂಲನ ಮಾಡುವ ಕುರಿತು ಒಪ್ಪಂದ.

2) ನಾರಿಯರ ರಾಜಕೀಯ ಹಕ್ಕುಗಳ ಕುರಿತು ಒಪ್ಪಂದ

3) ವಿವಾಹಿತ ನಾರಿಯರ ರಾಷ್ಟ್ರೀಯತೆಯ ಕುರಿತು ಒಪ್ಪಂದ

4) ವಿವಾಹಕ್ಕೆ ಸಮ್ಮತಿ, ವಿವಾಹದ ಕನಿಷ್ಠ ವಯಸ್ಸು ಮತ್ತು ವಿವಾಹದ ನೋಂದಣಿಯ ಕುರಿತು ಒಪ್ಪಂದ ಮತ್ತು ಶಿಫಾರಸ್ಸು.

ಹೀಗೆ ಇನ್ನೂ ಅನೇಕ ಒಪ್ಪಂದದ ವಿಧೇಯಕಗಳನ್ನು ಹೇಳಲಾಗಿದೆ. ಆದರೆ ಅವುಗಳನ್ನು ಆಕೆ ಹೊಂದಿದ್ದಾಳೆಯೇ? ಎಂಬುದು ಮಾತ್ರ ಅಸ್ಪಷ್ಟವಾಗಿದೆ.

**ಮಹಿಳಾ ರಾಜಕೀಯ ಹಕ್ಕುಗಳು :**

ಮಹಿಳಾ ರಾಜಕೀಯ ಹಕ್ಕುಗಳು, ಮತದಾನದ ಹಕ್ಕು, ಚುನಾವಣೆಗಳಲ್ಲಿ ಸ್ಥಳೀಯ ಸರ್ಕಾರದ ಮಟ್ಟದಿಂದ ರಾಷ್ಟ್ರೀಯ ಸರ್ಕಾರದವರೆಗೂ ಉತ್ತನ ಪದಾಧಿಕಾರಿಗಳ ಹುದ್ದೆಗೆ ಸ್ಪರ್ಧಿಸುವ ಹಕ್ಕು, ರಾಜಕೀಯ ಪರಮಾಧಿಕಾರದ ನಿರೂಪಣೆ ಮತ್ತು ಹಂಚಿಕೆ ಕುರಿತು ಪಾಲ್ಗೊಳ್ಳುವುದು ಎಂದರ್ಥ. ಆದರೆ ಈ ಎಲ್ಲಾ ರಾಜಕೀಯ ಹಕ್ಕುಗಳ ಪೈಕಿ ಮತದಾನದ ಹಕ್ಕಿನಷ್ಟೇ ಮಹಿಳೆಯರು ಸಮಾನವಾಗಿ ಪಡೆದಿದ್ದಾರೆ. ಉಳಿದ ರಾಜಕೀಯ ಹಕ್ಕುಗಳನ್ನು ಅವರು ಗಳಿಸಬೇಕಿದೆ. ಆದ್ದರಿಂದ ವಿಶ್ವಸಂಸ್ಥೆಯೂ ಮಹಿಳೆಯರಿಗೆ ರಾಜಕೀಯ ಹಕ್ಕುಗಳನ್ನು ದೊರಕಿಸಲು 1950 ದಶಕದಿಂದಲೂ ಪ್ರಯತ್ನಿಸುತ್ತಿದೆ. ಆದರೂ ಸಮರ್ಪಕವಾದ ರಾಜಕೀಯ ಹಕ್ಕುಗಳನ್ನು ಆಕೆ ಹೊಂದಲು ಇಂದಿಗೂ ಆಗುತ್ತಿಲ್ಲ.

ಮಹಿಳೆಯರಿಗೆ ರಾಜಕೀಯ ಮೀಸಲಾತಿ ಸಿಗುತ್ತಿದ್ದರೆ ಅದರು ಗಂಡಂದಿರ ಮರಣ ತರುವಾಯ ಅಥವಾ ಜಾತಿ ಮೀಸಲಾತಿಯಿಂದ. ಹೇಗೆಂದರೆ ಪ್ರತಿಯೊಂದು ದೇಶದ ಒಟ್ಟು ಜನಸಂಖ್ಯೆಯ ಸುಮಾರು ಶೇಕಡ 50 ರಷ್ಟು ಮಂದು ಮಹಿಳೆಯರೇ ಆಗಿದ್ದಾರೆ. ಹೆಚ್ಚಿನ ದೇಶಗಳಲ್ಲಿ ಶೇಕಡ 48 ರಿಂದ 49ರಷ್ಟು ಜನಸಂಖ್ಯೆ ಮಹಿಳೆಯರಿಂದ

ಕೂಡಿದೆ. ಆದರೆ ಪ್ರತಿ ದೇಶದಲ್ಲೂ ಮಹಿಳಾ ರಾಜಕೀಯ ಪ್ರಾತಿನಿಧ್ಯವು ಒಟ್ಟು ಚುನಾಯಿತ ಸ್ಥಾನಗಳ ಶೇಕಡ 10ಕ್ಕೂ ಕಡಿಮೆ ಇದೆ. ಮಹಿಳೆಯು ಶಾಸಕಾಂಗ/ಸಂಸತ್ತಿನಲ್ಲಿ ಪ್ರತಿನಿಧಿಸಲ್ಪಡದಿದ್ದರೆ ಸರ್ಕಾರವು ತನ್ನ ಆರ್ಥಿಕ ನೀತಿಗಳನ್ನು ಮಹಿಳೆಯರ ಪರವಾಗಿ ರೂಪಿಸುವುದಿಲ್ಲ. ಆದ್ದರಿಂದ ಮಹಿಳೆಯರಿಗಾಗಿ ರಾಜಕೀಯ ಪ್ರಾತಿನಿಧ್ಯವು ಅತ್ಯಗತ್ಯವಾಗಿದೆ.

ಮಹಿಳೆಯರಿಗಾಗಿ ರಾಜಕೀಯ ಮೀಸಲಾತಿ ಬಗ್ಗೆ 1993 ಮತ್ತು 1994ರಲ್ಲಿ ಭಾರತೀಯ ಸಂವಿಧಾನಕ್ಕೆ ತಿದ್ದುಪಡಿಗಳನ್ನು ತಂದು ಗ್ರಾಮೀಣ ಮತ್ತು ನಗರ ಸ್ಥಳೀಯ ಸ್ವಯಂ ಆಡಳಿತ ಸರ್ಕಾರಗಳಲ್ಲಿ ಶೇಕಡ 33ರಷ್ಟು ಸ್ಥಾನಗಳಲ್ಲಿ ಮಹಿಳಾ ಮೀಸಲಾತಿ ನೀಡಲಾಯಿತು. ಜೊತೆಗೆ ಸ್ಥಳೀಯ ಸರ್ಕಾರಗಳಿಗೆ ಪ್ರತಿ 5 ವರ್ಷಗಳಿಗೊಮ್ಮೆ ಚುನಾವಣೆ ನಡೆಸುವುದು, ಅನುದಾನ ನಿರ್ಧರಿಸುವುದು, ವಿಕೇಂದ್ರಿಕರಣದನ್ವಯ ಹೆಚ್ಚು ಅಧಿಕಾರ ನೀಡುವುದನ್ನು ಕೂಡಾ ಮೇಲ್ಕಂಡ ಸಾಂವಿಧಾನಿಕ ತಿದ್ದುಪಡಿಗಳು ಒಳಗೊಂಡಿವೆ. 1994ರಿಂದಲೂ ಈ ವ್ಯವಸ್ಥೆ ಚೆನ್ನಾಗಿ ಕಾರ್ಯನಿರ್ವಹಿಸುತ್ತಿದ್ದು, ಮಹಿಳೆಯ ರಾಜಕೀಯ ಪ್ರಾತಿನಿಧ್ಯವು ಸ್ವಲ್ಪ ಉತ್ತಮವಾಗಿದೆ. ಈ ಮಾದರಿಯಲ್ಲೇ ಸಂಸತ್ತು ಮತ್ತು ರಾಜ್ಯ ಶಾಸನ ಸಭೆಗಳಲ್ಲೂ ಶೇಕಡ 33ರಷ್ಟು ಸ್ಥಾನಗಳಲ್ಲಿ ಮಹಿಳಾ ಮೀಸಲಾತಿ ನೀಡಬೇಕೆಂಬ ಬೇಡಿಕೆಯಿದೆ. ಈ ಸಂಬಂಧ ವಿಧೇಯಕವು ಕೆಲವು ವರ್ಷಗಳಿಂದಲೂ ಸಂಸತ್ತಿನ ಮುಂದಿದೆ.

ಮಹಿಳಾ ಹಕ್ಕುಗಳೊಂದಿಗೆ ವ್ಯವಹರಿಸಲು ಅಂತರ–ರಾಷ್ಟ್ರೀಯ ಶಾಸನಾತ್ಮಕ ಸಾಧನಗಳು :

ಸಮಾನ ಗೌರವ, ಘನತೆ ಮತ್ತು ನಡಾವಳಿಗಳನ್ನು ಕುರಿತಂತೆ ಮಹಿಳಾ ಹಕ್ಕುಗಳನ್ನು ಅಂತರ–ರಾಷ್ಟ್ರೀಯ ಮಾನವ ಹಕ್ಕುಗಳ ಸಾಧನೆಗಳಲ್ಲೂ ಸಾರ್ವತ್ರಿಕವಾಗಿ ಮಾನ್ಯ ಮಾಡಲಾಗಿದೆ. ಮಾನವ ಹಕ್ಕುಗಳ ವಿಶ್ವವ್ಯಾಪಿ ಘೋಷಣೆಯು ತನ್ನ ಪ್ರವೇಶಿಕೆಯನ್ನು ಪುರುಷರು ಮತ್ತು ಮಹಿಳೆಯರ ನಡುವೆ ಸಮಾನ ಹಕ್ಕುಗಳನ್ನು ಮಾನ್ಯ ಮಾಡಿದೆ. ಈ ಘೋಷಣೆಯ ವಿಧಿ 1 ಪುರುಷರು ಮತ್ತು ಮಹಿಳೆಯರಿಗೆ ಸಮಾನ ಸ್ಥಾನಮಾನವನ್ನು ಖಾತ್ರಿಪಡಿಸುವುದು. "ಎಲ್ಲಾ ಮಾನವ ಜೀವಿಗಳೂ ಸ್ವತಂತ್ರವಾಗಿ ಜನಿಸಿದ್ದಾರೆ" ಎಂದೂ ವಿಶ್ವ ಸಂಸ್ಥೆಯ ಮಾನವ ಹಕ್ಕುಗಳ ಘೋಷಣೆ ಹೇಳುತ್ತದೆ.

ಈ ಘೋಷಣೆಯ ವಿಧಿ 2ರ ಪ್ರಕಾರ ಈ ಘೋಷಣೆಯಲ್ಲಿ ಉಲ್ಲೇಖಿಸಿರುವ ಎಲ್ಲಾ ಹಕ್ಕುಗಳು ಮತ್ತು ಸ್ವಾತಂತ್ರ್ಯಗಳನ್ನು ಪ್ರತಿಯೊಬ್ಬರೂ ಹೊಂದಲು ಹಕ್ಕುಳ್ಳವರು; ಈ ಹಕ್ಕಿಗೆ ಲಿಂಗದ ಭೇದಭಾವವಿಲ್ಲ. ಅಂತರರಾಷ್ಟ್ರೀಯ ನಾಗರೀಕ ಮತ್ತು ರಾಜಕೀಯ (ಐಸಿಸಿಪಿಆರ್) ಹಕ್ಕುಗಳ ಒಪ್ಪಂದ ಮತ್ತು ಅಂತರರಾಷ್ಟ್ರೀಯ, ಆರ್ಥಿಕ, ಸಾಮಾಜಿಕ ಮತ್ತು ಸಾಂಸ್ಕೃತಿಕ ಹಕ್ಕುಗಳ ಒಪ್ಪಂದಗಳ (ಐಸಿಈಎಸ್‌ಸಿಆರ್) ವಿಧಿ 2(1) ಮತ್ತು 2(2)ರಲ್ಲಿ ನಾಗರೀಕ, ರಾಜಕೀಯ, ಆರ್ಥಿಕ, ಸಾಮಾಜಿಕ ಮತ್ತು ಸಾಂಸ್ಕೃತಿಕ ಹಕ್ಕುಗಳಿಗೆ ಸಂಬಂಧಿಸಿದಂತೆ ಲಿಂಗಾಧಾರದ ತಾರತಮ್ಯಗಳನ್ನು ನಿಷೇಧಿಸುವುದನ್ನು ಎತ್ತಿ ಹಿಡಿಯಲಾಗಿದೆ.

# ಹಿಂದೂ – ಮಹಿಳೆ – ಆಸ್ತಿ ಹಕ್ಕು

## ಹಿಂದೂ ವಾರಸಾ ಅಧಿನಿಯಮ 1956 :

ಸಮಸ್ತ ಹಿಂದೂಗಳಿಗೆ ಅನ್ವಯವಾಗುವಂತೆ ಉತ್ತರಾಧಿಕಾರತ್ವಕ್ಕೆ ಸಂಬಂಧಿಸಿ ಈ ಕಾನೂನನ್ನು ಜಾರಿಗೆ ತರಲಾಗಿದೆ. ಈ ಅಧಿನಿಯಮವು ಮುಸ್ಲಿಂ, ಕ್ರೈಸ್ತ, ಪಾರ್ಸಿ ಮತ್ತು ಯಹೂದಿ ಧರ್ಮಿಯರಲ್ಲದ ಇತರರಿಗೆ ಅಂದರೆ

(1) ವೀರಶೈವ ಲಿಂಗಾಯಿತ ಮತ್ತು ಆರ್ಯ ಸಮಾಜ, ಬ್ರಹ್ಮಸಮಾಜ ಇವುಗಳ ಅನುಯಾಯಿಗಳನ್ನೊಳಗೊಂಡಂತೆ ಯಾವುದೇ ಸ್ವರೂಪದಲ್ಲಿ ಹಿಂದೂ ಧರ್ಮವನ್ನು ಆಚರಿಸುವವರಿಗೆ ಹಾಗೂ

(2) ಬೌದ್ಧ, ಜೈನ ಮತ್ತು ಸಿಖ್ ಧರ್ಮಿಯರಿಗೆಲ್ಲ ಅನ್ವಯಿಸುತ್ತದೆ.

ಈ ಅಧಿನಿಯಮ ಜಾರಿಗೆ ಬರುವ ಮೊದಲು ಹಿಂದೂ ಅವಿಭಕ್ತ ಕುಟುಂಬದ ಆಸ್ತಿಯ ವಿಭಾಗ ಆಗುವ ಮೊದಲೇ ಆ ಕುಟುಂಬದ ಸದಸ್ಯನೊಬ್ಬ ಸತ್ತಾಗ, ಅವನ ಪಾಲಿಗೆ ಬರುವಷ್ಟು ಆಸ್ತಿಯನ್ನು ಸೀಮಿತವಾಗಿ ಹೊಂದುವ ಹಕ್ಕು ಆತನ ವಿಧವೆಗೆ 1937ರ ಹಿಂದೂ ಮಹಿಳಾ ಆಸ್ತಿಯ ಹಕ್ಕಿನ ಶಾಸನದಿಂದ ಮೊದಲ ಬಾರಿಗೆ ಪ್ರಾಪ್ತವಾಯಿತು.

ಹೀಗೆ ಸೀಮಿತ ಅಧಿಕಾರದಿಂದ ಪಡೆದ ಆಸ್ತಿಯು ಅವಳ ಮರಣಾನಂತರ ಆಕೆಯ ಪತಿಯ ಸಹೋದರರಿಗೆ ವಾಪಸ್ಸಾಗುತ್ತಿತ್ತು. ಅದನ್ನು ಮಾರಾಟ ಮಾಡುವ ಅಥವಾ ಬೇರಾವುದೇ ರೀತಿಯಲ್ಲಿ ವಿಲೇವಾರಿ ಮಾಡುವ ಅಧಿಕಾರವು ಆಕೆಗೆ ಇರಲಿಲ್ಲ.

1956ರ ಹಿಂದೂ ವಾರಸಾ ಅಧಿನಿಯಮ ಜಾರಿಗೆ ಬಂದ ನಂತರ ಹಿಂದೂ ಮಹಿಳೆಯೊಬ್ಬಳು ಕುಟುಂಬದ ಆಸ್ತಿಯಲ್ಲಿ ಕುಟುಂಬದ ಮೃತ ಸದಸ್ಯನ ವಿಧವೆ ಹೆಂಡತಿಯಾಗಿ, ತಾಯಿಯಾಗಿ, ಮಗಳಾಗಿ, ವಿಧವೆ ಸೊಸೆಯಾಗಿ ಅಲ್ಲದೆ ಮೃತ ಹಿಂದೂ ಪುರುಷ ಅಥವಾ ಮಹಿಳೆಯ ಬೇರೆ ಬೇರೆ ರೀತಿಯಲ್ಲಿಯ ಸಂಬಂಧಿಯಾಗಿ ಮೃತನ(ಳ) ಆಸ್ತಿಯಲ್ಲಿ ಪಾಲು ಪಡೆಯುವಂತಾಯಿತಲ್ಲದೇ ಆಕೆಯ ಆ ಆಸ್ತಿಯನ್ನು ಯಾವುದೆ ರೀತಿಯಲ್ಲಿ ಪಡೆದಿರಲಿ, ಅದಕ್ಕೆ ಆಕೆ ಸಂಪೂರ್ಣ ಮಾಲೀಕಳಾಗಿ ಅದನ್ನು ತನ್ನ ಇಚ್ಛಾನುಸಾರ ವಿಲೇವಾರಿ ಮಾಡುವ ಹಕ್ಕನ್ನು ಪಡೆದಳು.

ಮೃತ ಹಿಂದೂ ಪುರುಷನ ಆಸ್ತಿಯನ್ನು ಯಾರು, ಹೇಗೆ ಪಡೆಯಬಹುದೆಂದರೆ ಹಿಂದೂ ಪುರುಷನು ಮೃತ್ಯು ಪತ್ರ ಬರೆಯದೇ ಮೃತಪಟ್ಟಲ್ಲಿ ಆತನ ಆಸ್ತಿಯನ್ನು

*(ಎ) ಮೊದಲನೆಯದಾಗಿ ಈ ಕಾಯಿದೆಯು ಆತನ ಮೊದಲ ವರ್ಗದ ವಾರಸುದಾರರು ಪಡೆಯಬಹುದು. ಅವರುಗಳೆಂದರೆ*

(ಅ) ಮೃತನ ಮಗ, ಮಗಳು, ವಿಧವೆ ಹೆಂಡತಿ, ತಾಯಿ

(ಆ) ಮೃತನಿಗಿಂತ ಮೊದಲೇ ಮೃತಪಟ್ಟಿದ್ದ ಮಗನ ಮತ್ತು ಮಗಳ ಗಂಡು ಮತ್ತು ಹೆಣ್ಣು ಮಕ್ಕಳು ಹಾಗೂ ಮೃತನ ವಿಧವೆ ಸೊಸೆ

(ಇ) ತನಗಿಂತ ಮೊದಲೇ ಮೃತಪಟ್ಟಿದ್ದ – ಮೊಮ್ಮಗನ ಅಂದರೆ ಮಗನ ಮಗನ ವಿಧವೆ ಹೆಂಡತಿ ಹಾಗೂ ಆತ ಗಂಡು ಮತ್ತು ಹೆಣ್ಣು ಮಕ್ಕಳು.

*(ಬಿ) ಎರಡನೆಯದಾಗಿ ಈ ಕಾಯಿದೆಯ ಪ್ರಕಾರ ಎರಡನೆಯ ವಾರಸುದಾರರು ಪಡೆಯುತ್ತಾರೆ. ಅವರುಗಳೆಂದರೆ*

(ಅ) ಮೃತನ ತಂದೆ

(ಆ) ಮೃತನ

(1) ಮಗನ ಮಗಳ ಮಗ ಅಂದರೆ ಗಂಡು ಮೊಮ್ಮಗಳ ಮಗ

(2) ಮಗನ ಮಗಳ ಮಗಳು ಅಂದರೆ ಗಂಡು ಮೊಮ್ಮಗಳ ಮಗಳು

(3) ಸಹೋದರ

(4) ಸಹೋದರಿ

(ಇ) ಮೃತನ

(1) ಮಗಳ ಮಗನ ಮಗ ಅಂದರೆ ಹೆಣ್ಣು ಮೊಮ್ಮಗನ ಮಗ

(2) ಮಗಳ ಮಗನ ಮಗಳು ಅಂದರೆ ಹೆಣ್ಣು ಮೊಮ್ಮಗನ ಮಗಳು

(3) ಮಗಳ ಮಗಳ ಮಗ ಅಂದರೆ ಮೊಮ್ಮಗಳ ಮಗ

(4) ಮಗಳ ಮಗಳ ಮಗಳು ಅಂದರೆ ಮೃತನ ಹೆಣ್ಣು ಮೊಮ್ಮಗಳ ಮಗಳು

(ಈ) ಮೃತನ

(1) ಸಹೋದರನ ಮಗ

(2) ಸಹೋದರಿಯ ಮಗ

(3) ಸಹೋದರನ ಮಗಳು

(4) ಸಹೋದರಿಯ ಮಗಳು

(ಉ) ಮೃತನ

(1) ತಂದೆಯ ತಂದೆ

(2) ತಂದೆಯ ತಾಯಿ

(ಊ) ಮೃತನ

(1) ತಂದೆಯ ವಿಧವೆ

(2) ಸಹೋದರನ ವಿಧವೆ

(ಋ) ಮೃತನ

(1) ತಂದೆಯ ಸಹೋದರ

(2) ತಂದೆಯ ಸಹೋದರಿ

(ಎ) ಮೃತನ

(1) ತಾಯಿಯ ತಂದೆ

(2) ತಾಯಿಯ ತಾಯಿ

(ಏ) ಮೃತನ

(1) ತಾಯಿಯ ಸಹೋದರ

(2) ತಾಯಿಯ ಸಹೋದರಿ

ಗ್ರಂಥಾಲಯ,
ಕನ್ನಡ ವಿಶ್ವವಿದ್ಯಾಲಯ, ಹಂಪಿ.

*(ಸಿ) ಮೂರನೆಯದಾಗಿ ನೋಡುವುದಾದರೆ ಮೊದಲ ಮತ್ತು ಎರಡನೆಯ ವಾರಸುದಾರರು ಜೀವಂತವಿಲ್ಲದಿದ್ದರೆ ಆತನ ಆಸ್ತಿಯನ್ನು ಆತನ ಗೋತ್ರಜರು ಪಡೆಯುತ್ತಾರೆ.*

130218

*(ಡಿ) ನಾಲ್ಕನೆಯದಾಗಿ ನೋಡುವುದಾದರೆ ಆತನ ಗೋತ್ರಜರು ಜೀವಂತವಾಗಿ ಇಲ್ಲದಿದ್ದರೆ ಆತನ ಒಂದೇ ಮೂಲದ ಸ್ವಜಾತಿ ಬಂಧು ಪಡೆಯುತ್ತಾನೆ.*

ಮೃತ ಹಿಂದೂ ಸ್ತ್ರೀಯ ಆಸ್ತಿಯ ಹಕ್ಕನ್ನು ಯಾರು, ಯಾವ ರೀತಿಯಲ್ಲಿ ಆಕೆ ಮೃತ್ಯು ಪತ್ರ ಮಾಡದೇ ಮೃತಳಾದಲ್ಲಿ ಪಡೆಯುತ್ತಾರೆ ಎಂದರೆ

(ಎ) ಮೊದಲನೆಯದಾಗಿ, ಆಕೆಯ ಮಗನಿಗೆ, ಮಗಳಿಗೆ ಮತ್ತು ಗಂಡನಿಗೆ

(ಬಿ) ಎರಡನೆಯದಾಗಿ, ಆಕೆಯ ಗಂಡನ ಉತ್ತರಾಧಿಕಾರಿಗಳಿಗೆ

(ಸಿ) ಮೂರನೆಯದಾಗಿ, ಆಕೆಯ ತಾಯಿ ಮತ್ತು ತಂದೆಗೆ

(ಡಿ) ನಾಲ್ಕನೆಯದಾಗಿ, ಆಕೆಯ ತಂದೆಯ ಉತ್ತರಾಧಿಕಾರಿಗಳಿಗೆ

(ಈ) ಐದನೆಯದಾಗಿ, ಆಕೆಯ ತಾಯಿಯ ಉತ್ತರಾಧಿಕಾರಿಗಳಿಗೆ

ಪ್ರಾಪ್ತವಾಗುತ್ತದೆ. ಒಂದು ವೇಳೇ ಮೃತ ಮಹಿಳೆಗೆ ಮಗ ಇಲ್ಲವೇ ಮಗಳು ಯಾರೂ ಇಲ್ಲದಿದ್ದರೆ, ಆಗ ಆಕೆಯ ಆಸ್ತಿಯನ್ನು ಹೊಂದುವ ಹಕ್ಕು (ಎ) ತನ್ನ ತಂದೆಯಿಂದ ಇಲ್ಲವೆ ತಾಯಿಯಿಂದ ವಾರಸಾ ಮೂಲಕ ಪಡೆದಿದ್ದರೆ ಅದು ಆಕೆಯ ತಂದೆಯ ಉತ್ತರಾಧಿಕಾರಿಗಳಿಗೆ.

*(ಇ) ತನ್ನ ಗಂಡನಿಂದ ಇಲ್ಲವೇ ಗಂಡನ ತಂದೆಯಿಂದ ವಾರಸಾ ಮೂಲಕ ಪಡೆದಿದ್ದರೆ, ಅದು ಆಕೆಯ ಗಂಡನ ವಾರಸುದಾರರಿಗೆ ಪ್ರಾಪ್ತವಾಗುತ್ತದೆ.*

ಒಟ್ಟಾರೆ ಹಿಂದೂ ಮಹಿಳೆಯ ಆಸ್ತಿಯ ಹಕ್ಕಿಗೆ ಸಂಬಂಧಿಸಿದಂತೆ ಕಂಡು ಬರುವುದೇನೆಂದರೆ –

(1) ಹಿಂದೂ ವಿಧವೆ ಹೆಂಡತಿಯೊಬ್ಬಳು ತನ್ನ ಮೃತ ಪತಿಯ ಅವಿಭಕ್ತ ಕುಟುಂಬದ ಆಸ್ತಿಯಲ್ಲಿ ತನ್ನ ಮಕ್ಕಳೊಂದಿಗೆ ಸಮಪಾಲನ್ನು ಪಡೆಯುತ್ತಾಳೆ.

(2) ತಮ್ಮ ಮೃತ ತಂದೆಯ ಆಸ್ತಿಯಲ್ಲಿ ಹಿಂದೂ ಹೆಣ್ಣು ಮಕ್ಕಳು ತಮ್ಮ ತಾಯಿ ಮತ್ತು ಸಹೋದರದರರೊಂದಿಗೆ ಸಮನಾದ ಪಾಲನ್ನು ಪಡೆಯುತ್ತಾಳೆ.

1994ರಲ್ಲಿ ಕರ್ನಾಟಕ ಶಾಸಕಾಂಗವು ಈ ಅಧಿನಿಯಮಕ್ಕೆ ತಂದ ತಿದ್ದುಪಡಿಯಿಂದಾಗಿ ಮಗಳು ಕೂಡಾ ಮಗನಂತೆ ತನ್ನ ತಂದೆಯ ಪಿತ್ರಾರ್ಜಿತ ಆಸ್ತಿಯಲ್ಲಿ ಸಮಾನ ಪಾಲು ಪಡೆಯುವ ದಾಯಾದಿತ್ವ (ಕೋಪಾರ್ಸ್ನರಿ) ಹಕ್ಕನ್ನು ಪಡೆದುಕೊಂಡಿದ್ದಾಳೆ. ಆದರೆ 1994 ಜುಲೈ 30ಕ್ಕಿಂತ ಮೊದಲು (ಅ) ಆಕೆಯು ಮದುವೆ ಆಗಿದ್ದಲ್ಲಿ; ಅಥವಾ (ಆ) ಕುಟುಂಬದ ಆಸ್ತಿಯನ್ನು ಕುಟುಂಬದ ಸದಸ್ಯರೆಲ್ಲಾ ವಿಭಾಗ ಮಾಡಿಕೊಂಡಿದ್ದಲ್ಲಿ, ಆಕೆಗೆ ದಾಯಾದಿತ್ವದ ಈ ಹಕ್ಕು ಪ್ರಾಪ್ತವಾಗುವುದಿಲ್ಲ. ಅಂದರೆ

(1) ತನ್ನ ತಂದೆ ಜೀವಂತವಿರುವವರೆಗೆ ಮಗಳು ಆತನ ಪಿತ್ರಾರ್ಜಿತ ಆಸ್ತಿಯಲ್ಲಿ ವಿಭಾಗ ಕೇಳುವಂತಿರಲಿಲ್ಲ

(ಕ) ತಂದೆಯು ತನ್ನ ಪಿತ್ರಾರ್ಜಿತ ಆಸ್ತಿಯಲ್ಲಿ ತನ್ನ ಮಗಳಿಗೆ ಪಾಲು ಕೊಡದೇ ತನ್ನ ಗಂಡು ಮಕ್ಕಳೊಂದಿಗೆ ಆಸ್ತಿಯ ವಿಭಾಗ ಮಾಡಿಕೊಂಡರೆ, ಅಥವಾ.

(ಖ) ತಂದೆ ನಿಧನವಾದ ನಂತರ ಮಗಳಿಗೆ ತನ್ನ ತಂದೆಯ ಪರಿತ್ರಾರ್ಜಿ ಆಸ್ತಿಯಲ್ಲಿ ವಿಭಾಗ ಕೇಳುವ ಹಕ್ಕು ಪ್ರಾಪ್ತಾವಾಗುತ್ತದೆ.

(2) ಮೃತ ಹಿಂದೂ ಮಹಿಳೆಯ ಆಸ್ತಿಯಲ್ಲಿ ಆಕೆಯ ಹೆಣ್ಣು ಮಕ್ಕಳು ಗಂಡು ಮಕ್ಕಳೊಂದಿಗೆ ಸಮನಾದ ಪಾಲನ್ನು ಪಡೆಯುತ್ತಾರೆ.

(3) ಹಿಂದೂ ಮಹಿಳೆ ಒಬ್ಬ ತಾಯಿಯಾಗಿ ತನ್ನ ಮೃತ ಮಗನ ಆಸ್ತಿಯಲ್ಲಿ ಆತನ ವಿಧವೆ ಹೆಂಡತಿ ಮತ್ತು ಮಕ್ಕಳೊಂದಿಗೆ ಸಮನಾದ ಪಾಲನ್ನು ಪಡೆಯುತ್ತಾಳೆ.

(4) ಹಿಂದೂ ಮಹಿಳೆ ಒಬ್ಬ ತಾಯಿಯಾಗಿ ತನ್ನ ಮೃತ ಮಗಳ ಆಸ್ತಿಯಲ್ಲಿ ಪಾಲನ್ನು ಪಡೆಯುತ್ತಾಳೆ. (ಮೃತ ಮಗಳ ಸಂಬಂಧಿ ಉತ್ತರಾಧಿಕಾರಿಗಳು ಯಾರೂ ಇಲ್ಲದಿದ್ದಾಗ ಮಾತ್ರ)

(5) ಹಿಂದೂ ವಿಧವೆ ಸೊಸೆ ತನ್ನ ಮೃತ ಗಂಡನ ಮೃತ ತಂದೆಯ (ಮಾನವ) ಆಸ್ತಿಯಲ್ಲಿ ಆತನ ಹೆಂಡತಿ (ಅತ್ತೆ) ಮತ್ತು ಆಕೆಯ ಮಕ್ಕಳೊಂದಿಗೆ ಸಮಪಾಲನ್ನು ಪಡೆಯುತ್ತಾಳೆ.

(6) ಮೃತ ಹಿಂದೂ ಪುರುಷನೊಬ್ಬನ ಮಗ ಅಥವಾ ಮಗಳು ಆತನಿಗಿಂತ ಮೊದಲೇ ಮೃತಪಟ್ಟಿದ್ದಲ್ಲಿ ಆತನ ಇಂತಹ ಮಗನ ಅಥವಾ ಮಗಳ ಹೆಣ್ಣು ಮಕ್ಕಳು ಮೃತನ ಆಸ್ತಿಯಲ್ಲಿ ಪಾಲನ್ನು ತಮ್ಮ ಸಹೋದರರೊಂದಿಗೆ ಪಡೆಯುತ್ತಾರೆ.

(7) ಅಲ್ಲದೆ ಮೃತ ಹಿಂದೂ ಸ್ತ್ರೀಯು ಮೊದಲೇ ಮೃತಪಟ್ಟಿದ್ದ ಮಗನ ಇಲ್ಲವೇ ಮಗಳ ಹೆಣ್ಣು ಮಕ್ಕಳು ತಮ್ಮ ಸಹೋದರರೊಂದಿಗೆ ಮೃತಳ ಆಸ್ತಿಯಲ್ಲಿ ಪಾಲು ಪಡೆಯುತ್ತಾರೆ.

(8) ಹಿಂದೂ ವಿಧವೆ ಹೆಂಡತಿ ತನ್ನ ಮೃತ ಪತಿಯ ಆಸ್ತಿಯನ್ನು ಪಡೆದ ನಂತರ ಅದರ ಮೇಲಿನ ತನ್ನ ಹಕ್ಕನ್ನು ಯಾವ ಸಂದರ್ಭದಲ್ಲೂ ಕಳೆದುಕೊಳ್ಳುವುದಿಲ್ಲ.

(9) ಹಿಂದೂ ಪುರುಷನೊಬ್ಬ ಮೃತಪಟ್ಟಾಗ ಆತನ ಹೆಂಡತಿಯ ಗರ್ಭದಲ್ಲಿದ್ದ ಮಗ (ಗಂಡಾಗಲಿ, ಹೆಣ್ಣಾಗಲಿ) ಆತನ ಮರಣದ ನಂತರ ಜನಿಸಿದಲ್ಲಿ ಆ ಮಗುವು ಮೃತನ ಜೀವಿತ ಕಾಲದಲ್ಲಿಯೇ ಜನಿಸಿದ ಮಗು ಎಂದೇ ಪರಿಗಣಿಸಲ್ಪಟ್ಟು ಮೃತನ ಆಸ್ತಿಯಲ್ಲಿ ಮೊದಲನೇ ವರ್ಗದ ವಾರಸುದಾರ ಆಗಿ ಪಾಲು ಪಡೆಯುವ ಹಕ್ಕುಳ್ಳದ್ದಾಗಿರುತ್ತದೆ.

ವಾಸದ ಮನೆಗೆ ಸಂಬಂಧಿಸಿದಂತೆ ವಿಶೇಷ ವ್ಯವಸ್ಥೆ ಅಂದರೆ ಮೃತ ಪುರುಷನ ವಾರಸುದಾರ ಮನೆಯಲ್ಲಿ ಭಾಗ ಕೇಳುವವರೆಗೂ ಸ್ತ್ರೀ ವಾರಸುದಾರಳು ಮನೆಯ ಭಾಗದ ಹಕ್ಕನ್ನು ಪಡೆಯುವಂತಿಲ್ಲ. ಆದರೆ ಅಂತಹ ಸ್ತ್ರೀ ವಾರಸುದಾರಳು ಆ ಮನೆಯಲ್ಲಿ ವಾಸವಾಗಿರುವ ಹಕ್ಕನ್ನು ಹೊಂದಿರುತ್ತಾಳೆ. ಯಾವ ಸಂದರ್ಭದಲ್ಲಿ ಎಂದರೆ,

(1) ಮೃತನ ಅವಿವಾಹಿತ ಮಗಳಾಗಿದ್ದ

(2) ವಿವಾಹಿತ ಮಗಳಾಗಿದ್ದು ತನ್ನ ಪತಿಯಿಂದ ಬೇರೆಯಾಗಿ ವಾಸಿಸುತ್ತಿದ್ದರೆ

(3) ಆಕೆಯು ವಿಧವೆಯಾಗಿದ್ದರೆ ಅಂತಹ ಸಂದರ್ಭದಲ್ಲಿ ಆ ವಾಸದ ಮನೆಯಲ್ಲಿ ವಾಸವಾಗಿರುವ ಹಕ್ಕನ್ನು ಹೊಂದಿರುತ್ತಾಳೆ. (ಕಲಂ 23)

ಕೆಲವೊಮ್ಮೆ ಈ ಆಸ್ತಿಯ ಪಾಲಿನಲ್ಲಿ ಪಡೆಯುವ ಹಕ್ಕನ್ನು ಆಕೆಯು ಕಳೆದುಕೊಳ್ಳಬಹುದು. ಅಂತಹ ಸಂದರ್ಭಗಳೆಂದರೆ, ಈ ಅಧಿನಿಯಮದನ್ವಯ ಆಸ್ತಿಯಲ್ಲಿ ಪಾಲು ಪಡೆಯುವ ಹಕ್ಕುಳ್ಳ ವಿಧವೆಯರು ತಮಗೆ ಉತ್ತರಾಧಿಕಾರತ್ವ ಉದ್ಭವವಾದ, ಅಂದರೆ ಮೃತನು ಮೃತಪಟ್ಟ ದಿನಾಂಕದಿಂದ ಪುನರ್ ವಿವಾಹವಾಗಿದ್ದ ಪಕ್ಷದಲ್ಲಿ ತಮ್ಮ ಈ ಹಕ್ಕನ್ನು ಕಳೆದುಕೊಳ್ಳುತ್ತಾರೆ. ಆದರೆ ಉತ್ತರಾಧಿಕಾರತ್ವ ಚಲಾಯಿಸಿ ಆಸ್ತಿ ಪಡೆದ ನಂತರ ಇಂತಹ ವಿಧವೆ ಪುನರ್ ವಿವಾಹ ಆದಲ್ಲಿ ತಾನು ಪಡೆದ ಆಸ್ತಿಯನ್ನು ಆಕೆಯು ಕಳೆದುಕೊಳ್ಳುವುದಿಲ್ಲ. (ಕಲಂ 24)

ಹೀಗೆ 1994ರಲ್ಲಿ ಹಿಂದೂ ವಾರಸಾ ಅಧಿನಿಯಮವು ತಿದ್ದುಪಡಿಯಾಗಿ ಮಗಳೂ ಕೂಡ ಮಗನಂತೆ ತನ್ನ ತಂದೆಯ ಪಿತ್ರಾರ್ಜಿತ ಆಸ್ತಿಯಲ್ಲಿ ಸಮಪಾಲು ಪಡೆಯುವ ದಾಯಾದಿತ್ವ ಹಕ್ಕನ್ನು ಪಡೆದುಕೊಂಡಳು. ಆದರೂ

ಮುಕ್ಕಾಲು ಪಾಲು ಮಹಿಳೆಯರಿಗೆ ಈ ಆಸ್ತಿಯ ಪಾಲಿನ ಹಕ್ಕು ದಕ್ಕುತ್ತಿರಲಿಲ್ಲ. ಆದ ಕಾರಣ ಇದನ್ನು ಮನಗಂಡು ನಂತರ 9–9–2005ರಂದು ಜಾರಿಗೆ ಬಂದ ಹಿಂದೂ ವಾರಸಾ (ತಿದ್ದುಪಡಿ) ಅಧಿನಿಯಮ (ಅಧಿನಿಯಮ ಸಂಖ್ಯೆ 39 2005) ಹಿಂದೂ ವಾರಸಾ ಕಾಯ್ದೆಯಲ್ಲಿ ಮಹತ್ತರ ಬದಲವಾಣೆಯನ್ನು ತಂದಿದೆ. ಈ ಮೊದಲು ಜಾರಿಯಲ್ಲಿದ್ದ ಹಿಂದೂ ವಾರಸಾ ಕಾಯ್ದೆಯ ಪ್ರಕಾರ ಗಂಡು ಮಕ್ಕಳಿಗಿರುವ ಆಸ್ತಿಯ ಮೇಲಿನ ಅಧಿಕಾರವು ಬದಲಾವಣೆ ಹೊಂದಿದೆ. ಈ ತಿದ್ದುಪಡಿಯ ಪ್ರಕಾರ ಮೂಲ ಅಧಿನಿಯಮದ ಕಲಂ 6ರ ಬದಲಿಗೆ ಹೊಸ 6(1) ಸೇರಿಸಲ್ಪಟ್ಟಿದ್ದು ಅದರ ತಿರುಳು ಕೆಳಕಂಡಂತಿದೆ.

**6(1) ದಾಯಾದಿ ಸ್ವತ್ತಿನಲ್ಲಿನ ಆಸಕ್ತಿಯ ಪ್ರಾಪ್ತಿ** : ಈ ತಿದ್ದುಪಡಿ ಅಧಿನಿಯಮವು ಜಾರಿಗೆ ಬಂದ ದಿನದಿಂದ ಮಿತಾಕ್ಷರ ಕಾನೂನು ಅನ್ವಯವಾಗುವ ಹಿಂದೂ ಅವಿಭಕ್ತ ಕುಟುಂಬದ ಸದಸ್ಯರ ಮಗಳು

(ಅ) ತನ್ನ ಹಕ್ಕಿನಿಂದಲೇ ಮಗನು ದಾಯಾದಿಯಾಗುವ ಹಾಗೆ ಹುಟ್ಟಿನಿಂದಲೇ ಅವಳು ದಾಯಾದಿಯಾಗುತ್ತಾಳೆ. ಅಂದರೆ ಅವಿಭಕ್ತ ಕುಟುಂಬದ ಆಸ್ತಿಯಲ್ಲಿ ಹಕ್ಕು ಪಡೆಯುತ್ತಾಳೆ.

(ಆ) ಆ ಅವಿಭಕ್ತ ಕುಟುಂಬದಲ್ಲಿ ಮಗನಾಗಿ ಅವಳು ಹುಟ್ಟಿದ್ದರೆ, ಅವಿಭಕ್ತ ಕುಟುಂಬದ ಆಸ್ತಿಯಲ್ಲಿ ಯಾವ ಹಕ್ಕುಗಳನ್ನು ಅವಳು ಪಡೆಯಬಹುದಿತ್ತೋ ಆ ಎಲ್ಲ ಹಕ್ಕುಗಳನ್ನು ಅವಳು ಪಡೆಯುತ್ತಾಳೆ.

(ಇ) ಆ ದಾಯಾದಿತ್ವದ ಆಸ್ತಿಗೆ ಸಂಬಂಧಿಸಿದಂತೆ ಮಗನಿಗಿರುವ ಹೊಣೆಯೇ ಆಕೆಗೂ ಇರುತ್ತದೆ.

ಹಿಂದೂ ವಾರಸಾ ಕಾಯ್ದೆಯಲ್ಲಿ ಮಿತಾಕ್ಷರ ದಾಯಾದಿಯ ಬಗೆಗೆ ಬಂದ ಉಲ್ಲೇಖವು ಮೇಲ್ಕಾಣಿಸಿದ ತಿದ್ದುಪಡಿಯ ಕಾರಣ ಪುತ್ರಿಯರನ್ನು ಒಳಗೊಳ್ಳುತ್ತದೆಯೆಂದು ಭಾವಿಸಲಾಗುವುದು. 20–12–2004ಕ್ಕಿಂತ ಮೊದಲೇ ಪಾಲು ಹಾಗೂ ಉಯಲು ಪ್ರಕಾರದ ಆಸ್ತಿಯ ವಿಲೇವಾರಿ ಸೇರಿದಂತೆ ಆಸ್ತಿಯ ಯಾವುದೇ ವಿಲೇವಾರಿ ಅಥವಾ ಪರಭಾರೆಯ ಮೇಲೆ ಆ ತಿದ್ದುಪಡಿಯು ಯಾವುದೇ ಪರಿಣಾಮ ಬೀರುವುದಿಲ್ಲ ಹಾಗೂ ಅದನ್ನು ಅನೂರ್ಜಿತಗೊಳಿಸುವುದಿಲ್ಲ. ಈ ತಿದ್ದುಪಡಿಯಿಂದಾಗಿ ದಾಯಾದಿತ್ವದ ಹಕ್ಕುಗಳನ್ನು ಪಡೆಯುವ ಮಹಿಳೆಯು ಆಸ್ತಿಯನ್ನು ಮರಣ ಶಾಸನದ ಮೂಲಕ ವಿಲೇವಾರಿ ಮಾಡುವ ಅಧಿಕಾರ ಹೊಂದುತ್ತಾಳೆ. ಹೀಗೆ ಆಸ್ತಿಯ ಹಕ್ಕನ್ನು ಸ್ತ್ರೀ ಹೊಂದಲು ಹಲವು ರೀತಿಯಲ್ಲಿ ಕಾಯಿದೆಗಳನ್ನು ತಿದ್ದುಪಡಿ ಮಾಡಿ ಆಕೆಯನ್ನು ಸಾಧ್ಯವಾದಷ್ಟು ಸಂಕೋಲೆಗಳಿಂದ ಪೂರ್ಣ ಸ್ವತಂತ್ರವಾಗಿ ಬದುಕಲು ಅನುವು ಮಾಡಿಕೊಟ್ಟಿದೆ.

**ದುಡಿಯುವ ಮಹಿಳೆಯರ ಹಕ್ಕುಗಳು :**

ದುಡಿಯುವ ಮಹಿಳೆಯರಿಗೂ ಸಹ ವಿಶೇಷವಾದ ಸವಲತ್ತುಗಳನ್ನು ನೀಡುವುದರ ಮೂಲಕ ಸರ್ಕಾರ ಮುಂದಾಗಿದೆ. ಜೀವನ ನಿರ್ವಹಣೆಗಾಗಿ ದುಡಿಯುವ ಮಹಿಳೆಯನ್ನು ದುಡಿಸಿಕೊಳ್ಳುವವರಿಂದ ಹಲವು ರೀತಿಯ ಶೋಷಣೆಗೊಳಗಾಗುತ್ತಿದ್ದಾಳೆ. ಇದನ್ನು ತಪ್ಪಿಸಲು ಸಮಾನ ಉದ್ಯೋಗ ಸಮಾನ ವೇತನ ಎಂಬ ನಿಯಮವನ್ನು ಜಾರಿಗೊಳಿಸಲಾಗಿದೆ.

**ಕನಿಷ್ಠ ಮಜೂರಿ (ಕೂಲಿ) :** ದುಡಿಯುವ ಪ್ರತಿಯೊಬ್ಬ ಮಹಿಳೆ ತನ್ನ ದುಡಿಮೆಗೆ ಕಾನೂನು ವಿಧಿಸುವ ಕನಿಷ್ಠ ಮಜೂರಿಯನ್ನು ಪಡೆಯುವ ಹಕ್ಕನ್ನು ಹೊಂದಿರುತ್ತಾಳೆ. ಮಹಿಳೆಯೊಬ್ಬಳು ಕನಿಷ್ಠ ಮಜೂರಿಗಿಂತ ಕಡಿಮೆ ಮಜೂರಿಗೆ ಕೆಲಸ ಮಾಡಲು ಒಪ್ಪಿಕೊಂಡಿದ್ದಾಳೆಂದು ಆಕೆಯನ್ನು ದುಡಿಸಿಕೊಳ್ಳುವವರು ಹೇಳುವಂತಿಲ್ಲ. ಕನಿಷ್ಠ ಮಜೂರಿ ಕೊಡದೇ ಇರುವುದು ಶಿಕ್ಷಾರ್ಹವಾದ ಅಪರಾಧವಾಗಿರುತ್ತದೆ. ಮಹಿಳೆ ಮತ್ತು ಪುರುಷರು ಮಾಡುವ ಕೆಲಸ ಒಂದೇ ರೀತಿಯ ನೈಪುಣ್ಯತೆ ಮತ್ತು ಶ್ರಮ ಒಳಗೊಂಡಿದ್ದರೆ ಇಬ್ಬರಿಗೂ ಸಮಾನ ವೇತನವನ್ನು ಕೊಡಬೇಕಾಗುತ್ತದೆ ಎಂದು ಕನಿಷ್ಠ ಮಜೂರಿ ನಿಯಮ ತಿಳಿಸುತ್ತದೆ.

**ಕಾರ್ಖಾನೆಗಳಲ್ಲಿ ದುಡಿಯುವ ಮಹಿಳೆಯರ ವಿಶೇಷ ಹಕ್ಕುಗಳು :**

1) ಕಾರ್ಖಾನೆಯಲ್ಲಿ ಮಹಿಳೆಯರಿಗಾಗಿ ಪ್ರತ್ಯೇಕ ಶೌಚಾಲಯಗಳನ್ನು ಒದಗಿಸಬೇಕು.

2) ಕಾರ್ಖಾನೆಯಲ್ಲಿ 30ಕ್ಕಿಂತ ಹೆಚ್ಚು ಮಹಿಳಾ ಕಾರ್ಮಿಕರು ಇದ್ದಲ್ಲಿ ಕೆಲಸಗಾರರ ಮಕ್ಕಳಿಗಾಗಿ ಶಿಶುವಿಹಾರವೊಂದನ್ನು ಒದಗಿಸಬೇಕು.

3) ಮಹಿಳೆಯಿಂದ ವಾರದಲ್ಲಿ 48 ಗಂಟೆಗಳಿಗಿಂತ ಹೆಚ್ಚು ಅವಧಿಗೆ ಮತ್ತು ಸತತವಾಗಿ 5 ಗಂಟೆಗಳಿಗಿಂತ ಹೆಚ್ಚು ಅವಧಿಗೆ ಕೆಲಸ ಮಾಡಿಸಬಾರದು.

4) ಹೆರಿಗೆ ಸೌಲಭ್ಯ : ಹೆರಿಗೆ ಸೌಲಭ್ಯ ಅಧಿನಿಯಮ 1961ರ ಅನ್ವಯ ಈ ಕೆಳಗಿನ ಸೌಲಭ್ಯಗಳನ್ನು ಮಹಿಳೆಗೆ ಕೊಡಮಾಡಲಾಗಿದೆ.

(ಅ) ಹೆರಿಗೆಗೆ ಮೊದಲು 6 ವಾರ ಮತ್ತು ಹೆರಿಗೆಯ ನಂತರ 6 ವಾರಗಳವರೆಗೆ ವೇತನಸಹಿತ ರಜೆಯನ್ನು ಮಹಿಳೆಯ ಪಡೆಯುವ ಹಕ್ಕನ್ನು ಹೊಂದಿದ್ದಾಳೆ. ಆಕೆಯು ಇಚ್ಛಿಸಿದಲ್ಲಿ ಇಡೀ 12 ವಾರಗಳ ರಜೆಯನ್ನು ಹೆರಿಗೆಯ ನಂತರ ತೆಗೆದುಕೊಳ್ಳಬಹುದು. ಹೆರಿಗೆ ನಂತರದ 6 ವಾರದ ಅವಧಿಯಲ್ಲಿ ಮಹಿಳೆಯಿಂದ ಕೆಲಸ ಮಾಡಿಸುವುದು ಅಪರಾಧವಾಗುತ್ತದೆ.

(ಆ) ಶಾರೀರಿಕ ಆಯಾಸದ ಕೆಲಸ ಮಾಡಿಸುವಂತಿಲ್ಲ : ಹೆರಿಗೆ ಪೂರ್ವದ ಒಂದು ತಿಂಗಳ ಅವಧಿಯಲ್ಲಿ ಗರ್ಭಿಣಿ ಮಹಿಳೆಯಿಂದ ಶಾರೀರಿಕ ಆಯಾಸವಾಗುವ, ದೀರ್ಘ ಕಾಲ ನಿಂತು ಮಾಡಬೇಕಾಗುವ, ಭಾರ ಹೊರುವ ಅಥವಾ ಮಗುವಿನ ಬೆಳವಣಿಗೆಗೆ ಅಪಾಯ ತರುವ ಯಾವುದೇ ಕೆಲಸವನ್ನು ಮಾಡಿಸಬಾರದು.

(ಇ) ಗರ್ಭಪಾತದ ನಂತರ 6 ವಾರಗಳ ವೇತನ ಸಹಿತದ ರಜೆ ಪಡೆಯಲು ಮಹಿಳೆಗೆ ಹಕ್ಕುಂಟು.

(ಈ) ಹಾಲುಣಿಸುವುದಕ್ಕೆ ವಿರಾಮ : ಹೆರಿಗೆ ನಂತರ ಮಗುವಿನೊಂದಿಗೆ ಮಹಿಳೆ ಕೆಲಸಕ್ಕೆ ಹಿಂತಿರುಗಿದಾಗ ಮಗುವಿನ ಪೋಷಣೆಗಾಗಿ ಆಕೆಗೆ ದಿನದಲ್ಲಿ ಎರಡು ಬಾರಿ ಮಗುವಿಗೆ 15 ತಿಂಗಳು ತುಂಬುವವರೆಗೆ ಹಾಲುಣಿಸುವುದಕ್ಕಾಗಿ ವಿರಾಮ ಕೊಡಬೇಕು.

(ಉ) ಹೆರಿಗೆಯ ಸೌಲಭ್ಯವನ್ನು ಪಡೆಯಬೇಕಾದಲ್ಲಿ ಕೆಲಸಗಾರ ಮಹಿಳೆ ಮದುವೆಯಾಗಿರಲೇಬೇಕೆಂಬ ನಿಯಮವೇನೂ ಇಲ್ಲ.

(ಊ) ಹೆರಿಗೆ ರಜೆ ಪಡೆದುಕೊಂಡ ಅವಧಿಯಲ್ಲಿ ಮಹಿಳೆ ಬೇರೆಡೆ ಕೆಲಸ ಮಾಡಿದಲ್ಲಿ ಆಕೆಗೆ ಈ ಸೌಲಭ್ಯ ದೊರೆಯುವುದಿಲ್ಲ.

ನಷ್ಟ ಪರಿಹಾರದ ಹಕ್ಕನ್ನು ಸಹ ಕೆಲಸಗಾರರು ಹೊಂದಿದ್ದಾರೆ. ಭಾರತ ದಂಡ ಸಂಹಿತೆ ಸೆಕ್ಷನ್ 354 ಮಹಿಳೆಯರ ರಕ್ಷಣೆಗೋಸ್ಕರವೇ ಇದೆ. ಇದು ಆಕೆಯ ಜೀವನಾಂಶದ ಹಕ್ಕಿನ ಬಗ್ಗೆಯೂ ಹೇಳುತ್ತದೆ.

ಉದ್ದಿಮೆಗಳಲ್ಲಿ ಅಥವಾ ಕಾರ್ಖಾನೆಗಳಲ್ಲಿ ಕೆಲಸ ಮಾಡುವಾಗ ಅಪಘಾತ ಸಂಭವಿಸಿದ್ದರೆ, ಹಲವು ಕಾರಣಗಳಿರಬಹುದು.

(ಅ) ಕೆಲಸಗಾರನು ಗಾಯಗೊಂಡಲ್ಲಿ

(ಆ) ತಾನು ಮಾಡುತ್ತಿದ್ದ ಕೆಲಸದ ಕಾರಣದಿಂದಾಗಿ ಕಾಯಿಲೆ ಬಿದ್ದಲ್ಲಿ

(ಇ) ಅಪಘಾತ ಅಥವಾ ಕಾಯಿಲೆಯಿಂದಾಗಿ ತನ್ನ ಗಳಿಕೆಯ ಸಾಮರ್ಥ್ಯವು ಪೂರ್ಣವಾಗಿ ಇಲ್ಲವಾದಲ್ಲಿ ಅಥವಾ ಭಾಗಶಃ ಕಡಿಮೆಯಾದಲ್ಲಿ ಮಾಲೀಕನಿಂದ ಪರಿಹಾರ ಪಡೆಯುವ ಹಕ್ಕನ್ನು ಹೊಂದಿರುತ್ತಾಳೆ. ಒಂದು ವೇಳೆ ಆಕೆ ತಾನು ಮಾಡುತ್ತಿದ್ದ ಕೆಲಸದ ಕಾರಣದಿಂದ ಅಥವಾ ಅಪಘಾತದಿಂದ ಮೃತಪಟ್ಟರೂ ಸಹ ಆಕೆಯ ಆಶ್ರಿತರು ಆಕೆಯ ಗಳಿಕೆಯ ಮೇಲೆ ಅವಲಂಬಿತನಾದ ಆಕೆಯ ಗಂಡನು ಸಹ ಪರಿಹಾರ ಪಡೆಯುವ ಹಕ್ಕುಳ್ಳವನಾಗಿರುತ್ತಾನೆ.

ಈ ರೀತಿಯ ಹಕ್ಕುಗಳನ್ನು ಕಾನೂನಿನ ಚೌಕಟ್ಟಿನಲ್ಲಿ ಸಮ್ಮತವಾಗಿಯೇ ಪಡೆಯಬೇಕು.

ಹೀಗೆ ಮಹಿಳೆಯನ್ನು ಪುರುಷನ ಸಮಾನ ಸ್ಥಾನದಲ್ಲಿ ಸ್ಥಾಪಿಸುವ ಕೆಲಸವನ್ನು ಅನೇಕ ಸಮಾಜ ಸುಧಾರಕರು ಮಾಡಿದ್ದಾರೆ. ಸ್ತ್ರೀ ಸಮಾನತೆಗಾಗಿ ಹಾಗೂ ಭಾರತದಂಥ ಜಾತಿ ಆಧಾರಿತ ಸಮಾಜದಲ್ಲಿ ಸ್ತ್ರೀ ವಿಮೋಚನೆಗೆ ಮಹಿಳಾ ಹಕ್ಕನ್ನು ಸ್ಥಾಪಿಸಲು ಲಿಂಗಭೇದರಹಿತ ಸಮಾಜದ ನಿರ್ಮಾಣದ ಕನಸನ್ನು ಕಂಡರು. ಶತಮಾನಗಳಿಂದಲೂ ಸ್ತ್ರೀಯರಿಗೆ ಆಗಿರುವ ಅನ್ಯಾಯಗಳನ್ನು ಸರಿಪಡಿಸಲು ಶಾಸನಾತ್ಮಕವಾಗಿ ಕಾನೂನುಗಳನ್ನು ರಚಿಸುವ ಅವಶ್ಯಕತೆಯನ್ನು ಮನಗಂಡವರಲ್ಲಿ ಪ್ರಮುಖರೆಂದರೆ ಡಾ|| ಬಾಬಾ ಸಾಹೇಬ್ ಅಂಬೇಡ್ಕರ್. ಭಾರತದಲ್ಲಿ ಸ್ತ್ರೀಯರ ಸಂರಕ್ಷಣೆ ಮತ್ತು ಸಮಾನತೆಗಾಗಿ ಸಂವಿಧಾನಾತ್ಮಕ ನಿಯಮಗಳನ್ನು ರಚಿಸಿದರು. ಆ ದಿಸೆಯಲ್ಲಿ ಅವರು ರಚಿಸಿದ ಕಾನೂನುಗಳ ಬಗ್ಗೆ ಈಗಾಗಲೇ ಅರಿತಿದ್ದೇವೆ. ಅವುಗಳನ್ನು ಒಟ್ಟಾರೆ ಅರ್ಥೈಸುವುದಾದರೆ

(1) ಭಾರತದ ಸಂವಿಧಾನದ ಅನುಚ್ಛೇದ 14ರಲ್ಲಿ ಭಾರತದ ಭೌಗೋಳಿಕ ಪ್ರದೇಶದಲ್ಲಿ ವಾಸವಿರುವ ಪ್ರತಿಯೊಬ್ಬ ಪ್ರಜೆಯೂ ಕಾನೂನಿನ ಮುಂದೆ ಸಮಾನ ಎಂದು ಘೋಷಿಸಿದೆ.

(2) ಅನುಚ್ಛೇದ 15ರಲ್ಲಿ ಸರ್ಕಾರವು ಯಾವುದೇ ಪ್ರಜೆಯ ವಿರುದ್ಧ ಜಾತಿ, ಮತ, ಕುಲ, ಲಿಂಗ ಮತ್ತು ಹುಟ್ಟಿನ ಆಧಾರದ ಮೇಲೆ ಯಾವುದೇ ತಾರತಮ್ಯ ಮಾಡುವಂತಿಲ್ಲ ಎಂದಿದೆ.

(3) ಅನುಚ್ಛೇದ 16ರಲ್ಲಿ ಲಿಂಗಭೇದ ಮತ್ತು ಲೈಂಗಿಕ ಶೋಷಣೆಯ ನಿಷೇಧವನ್ನು ಹೇಳಿದೆ ಮತ್ತು ಸರ್ಕಾರದ ಯಾವುದೇ ಕಛೇರಿಯ ಉದ್ಯೋಗಾವಕಾಶದ ವಿಷಯದಲ್ಲಿ ಸರ್ವರಿಗೂ ಸಮಾನ ಅವಕಾಶಗಳಿರಬೇಕೆಂದು ಹೇಳಿದೆ.

(4) ಅನುಚ್ಛೇದ 29ರಲ್ಲಿ ಸ್ತ್ರೀ ಮತ್ತು ಪುರುಷರಿಗೆ ಸರಿಸಮನಾದ ಜೀವನಾವಕಾಶಗಳನ್ನು ಒದಗಿಸತಕ್ಕದ್ದು ಮತ್ತು ಸ್ತ್ರೀ ಪುರುಷರ ಸೇವೆಗೆ ಸಮಾನ ವೇತನವಿರಬೇಕು ಎಂದು ಹೇಳಲಾಗಿದೆ.

(5) ಅನುಚ್ಛೇದ 42ರಲ್ಲಿ ಮಹಿಳೆಯರ ಸೇವೆಗೆ ಅಗತ್ಯವಾದ ನ್ಯಾಯಚಿತವಾದ ಮಾನವೀಯ ವಾತಾವರಣವನ್ನು ಕಲ್ಪಿಸಬೇಕು. ಮಹಿಳೆಗೆ ಪ್ರಸೂತಿ ಅಥವಾ ಹೆರಿಗೆ ಪರಿಹಾರಗಳನ್ನು ಒದಗಿಸಬೇಕಾದುದು ಸರ್ಕಾರದ ಕರ್ತವ್ಯವಾಗಿದೆ ಎಂದಿದ್ದಾರೆ. ಈ ಎಲ್ಲಾ ಉದ್ದೇಶಗಳನ್ನು ಮನಗಂಡು ಮಹಿಳೆಯರ ಮೂಲಭೂತ ಹಕ್ಕುಗಳಾದ ಸಮಾನತೆ, ಸ್ವಾತಂತ್ರ್ಯ, ಶೋಷಣೆಯ ವಿರುದ್ಧದ ಧಾರ್ಮಿಕ ಸ್ವಾತಂತ್ರ್ಯ, ಸಾಂಸ್ಕೃತಿಕ ಹಾಗೂ ಶೈಕ್ಷಣಿಕ ಹಕ್ಕುಗಳನ್ನು ಸ್ತ್ರೀ ಪುರುಷರಿಬ್ಬರಿಗೂ ಸಮಾನವಾಗಿ ಹಕ್ಕನ್ನು ಪಡೆದರು. ಇದರಿಂದ ಮಹಿಳೆ ತನ್ನ ಶಕ್ತಿ ಸಾಧ್ಯತೆಗಳನ್ನು ಎಲ್ಲಾ ಕ್ಷೇತ್ರಗಳಲ್ಲೂ ತೋರಗೊಡಲು ಸಾಧ್ಯವಾಯಿತು ಹಾಗೂ ಮಹಿಳಾ ಸಬಲೀಕರಣಕ್ಕೆ ದಾರಿಯಾಯಿತು.

ಇತಿಹಾಸವನ್ನು ಅವಲೋಕಿಸಿದಾಗ ಮಹಿಳೆಯರ ಸಬಲೀಕರಣಕ್ಕೆ ಮತ್ತು ಸ್ವಾತಂತ್ರ್ಯದ ಹಕ್ಕಿಗಾಗಿ ಶ್ರಮಿಸಿದ ಅನೇಕ ಮಹನೀಯರು ಹೋರಾಡಿದ್ದಾರೆ. ಅವರಲ್ಲಿ ಪ್ರಮುಖರಾದವರೆಂದರೆ ಬುದ್ಧ ಆದಿಶಂಕರಾಚಾರ್ಯ, ಬಸವಣ್ಣ, ರಾಜರಾಂ ಮೋಹನರಾಯ್, ಈಶ್ವರಚಂದ್ರ ವಿದ್ಯಾಸಾಗರ, ಸ್ವಾಮಿ ವಿವೇಕಾನಂದ, ಮಹಾತ್ಮ ಗಾಂಧಿ, ಜವಾಹರ್‌ಲಾಲ್ ನೆಹರು ಮುಂತಾದವರು. ಇವರಲ್ಲದೆ ಬ್ರಿಟಿಷ್ ಸರ್ಕಾರವೂ ಕೂಡ ಮಹಿಳೆಯರ ಸಶಕ್ತೀಕರಣಕ್ಕೆ ಕೆಲವೊಂದು ಕಾನೂನುಗಳನ್ನು ಜಾರಿಗೆ ತಂದಿತು. ಆದರೆ ಮಹಿಳೆಯರನ್ನು ಸಬಲೀಕರಣಗೊಳಿಸಬೇಕೆಂಬ ಇಚ್ಛೆ ಹೊಂದಿದ ಜನರು ಮಾತ್ರ ಮಹಿಳೆಯರ ಸಶಕ್ತೀಕರಣ ಮಾಡಲು ಸಾಧ್ಯವಾಗುವುದಿಲ್ಲ. ಮಹಿಳೆಯರು ಸ್ವಂತ ತಾವೇ ಮುಂದೆ ಬಂದು ಯಾವುದೇ ಜಾತಿ, ಧರ್ಮ ಎಂದು ಭೇದ ಮಾಡದೇ ತಮ್ಮ ಸಶಕ್ತೀಕರಣದ ಕಡೆಗೆ ಒಗ್ಗಟ್ಟಾಗಿ ಮುಂದೆ ಸಾಗಬೇಕು.

ಸಾಮಾನ್ಯ ಮಹಿಳೆಯರು ಈಗಾಗಲೇ ಸಶಕ್ತೀಕರಣಗೊಂಡು ಮಹತ್ವದ ಸಾಧನೆ ಮಾಡಿದ ಮಹಿಳೆಯರಿಂದ ಪ್ರಭಾವಿತರಾಗಿ ಅವರ ಮಾರ್ಗವನ್ನು ಅನುಸರಿಸಲು ಪ್ರಯತ್ನಿಸಬೇಕು. ಇಂತಹ ಪ್ರಭಾವಿ ದಿಟ್ಟ ಮಹಿಳೆಯರಲ್ಲಿ ಪ್ರಮುಖರಾದವರೆಂದರೆ, ಭಾರತದ ಪ್ರಥಮ ಮಹಿಳಾ ಪ್ರಧಾನಿ ಮತ್ತು ಉಕ್ಕಿನ ಮಹಿಳೆ ಶ್ರೀಮತಿ ಇಂದಿರಾಗಾಂಧಿ, ವಿಶ್ವಸಂಸ್ಥೆಯ ಸಾಮಾನ್ಯ ಸಭೆಯ ಪ್ರಥಮ ಮಹಿಳಾ ಅಧ್ಯಕ್ಷೆ ಶ್ರೀಮತಿ ವಿಜಯಲಕ್ಷ್ಮಿ ಪಂಡಿತ್, ನೊಬೆಲ್ ಶಾಂತಿ ಪುರಸ್ಕಾರ ಪಡೆದ ಸಮಾಜ ಸೇವಕಿ ಮದರ್ ತೆರೇಸಾ, ಗಾನಕೋಗಿಲೆ ಸರೋಜಿನಿ ನಾಯ್ಡು, ಪ್ರಥಮ ಮಹಿಳಾ ಮುಖ್ಯಮಂತ್ರಿ ಸುಚೇತಾ ಕೃಪಲಾನಿ, ಪ್ರಥಮ ಮಹಿಳಾ ಐ.ಪಿ.ಎಸ್. ಅಧಿಕಾರಿ ಕಿರಣ್‌ಬೇಡಿ, ಗಗನಯಾತ್ರಿ ಕಲ್ಪನಾಚಾವ್ಲಾ,

ಮೀನಾಕುಮಾರಿ, ಐಶ್ವರ್ಯರೈ, ಲತಾಮಂಗೇಶ್‌ಕರ್, ಸೋನಿಯಾ ಗಾಂಧಿ, ಸುಷ್ಮಾ ಸ್ವರಾಜ್, ಉಮಾಭಾರತಿ ಮುಂತಾದವರು ಹೀಗೆ ಪಟ್ಟಿ ಬೆಳೆಯುತ್ತಾ ಹೋಗುತ್ತದೆ.

ಇಷ್ಟೆಲ್ಲಾ ಸಾಧನೆಯ ಸಾಧಕಿಯರಿದ್ದರೂ, ಬಲಿಷ್ಠ ಕಾನೂನುಗಳಿದ್ದರೂ ಹಲವು ಹಕ್ಕು ಬಾಧ್ಯತೆಗಳನ್ನು ಹೊಂದಿದ್ದರೂ ಸಹ ಇಂದಿಗೂ ಮಹಿಳೆಯರನ್ನು ಕ್ರೂರವಾಗಿ ಹಾಗೂ ಅನಾಗರೀಕವಾಗಿ ನಡೆಸಿಕೊಂಡು ಹಿಂಸಿಸಲಾಗುತ್ತದೆ. ಹೆಣ್ಣುಭ್ರೂಣ ಹತ್ಯೆ, ಹೆಣ್ಣು ಶಿಶು ಹತ್ಯೆ, ಬಾಲ ಕಾರ್ಮಿಕತೆ, ವರದಕ್ಷಿಣೆ, ಬಾಲ್ಯವಿವಾಹ, ಅತ್ಯಾಚಾರ, ಲೈಂಗಿಕ ಕಿರುಕುಳ, ಲಿಂಗ ಅಸಮಾನತೆ ಪೀಡಿಸುವುದು, ಬಲತ್ಕಾರದ ವೇಶ್ಯಾವಾಟಿಕೆ ಮುಂತಾದ ರೂಪಗಳಲ್ಲಿ ಹಿಂಸಿಸಲಾಗುತ್ತಿದೆ. ಭಾರತೀಯ ವಿಧವೆಯ ಪರಿಸ್ಥಿತಿಯಂತೂ ತುಂಬಾ ಶೋಚನೀಯವಾಗಿದೆ. ತನ್ನ ಕುಟುಂಬ ವರ್ಗದವರಿಂದ ಮತ್ತು ಸಮಾಜದಿಂದ ಕಡೆಗಾಣಿಸಲ್ಪಟ್ಟಿದ್ದಾಳೆ. ಅವಳ ಮೂಲಭೂತ ಅವಶ್ಯಕತೆಗಳನ್ನು ಜೀವನಾವಶ್ಯಕ ವಸ್ತುಗಳನ್ನು ಕಿತ್ತುಕೊಂಡು ಆಕೆಯನ್ನು ವೇಶ್ಯಾವಾಟಿಕೆಗೆ ತಳ್ಳುತ್ತಿದ್ದಾರೆ. ಇದರಿಂದ ಅಸಹಾಯಕವಾಗಿ ಬಲಿಪಶುವಾಗುವುದರ ಜೊತೆಗೆ ಭಯಾನಕ ಈ ರೋಗವಾದ ಏಡ್ಸ್‌ಗೂ ತುತ್ತಾಗುತ್ತಿದ್ದಾಳೆ.

ಅವಳ ಮೇಲೆ ನಿರಂತರ ದಬ್ಬಾಳಿಕೆ, ದೌರ್ಜನ್ಯ, ಹಿಂಸಾಚಾರ, ಕ್ರೌರ್ಯಗಳು ನಡೆಯುತ್ತಲೇ ಇವೆ. ಯಾವುದೇ ದಿನಪತ್ರಿಕೆಯ ಪುಟಗಳು ಅಥವಾ ಟಿ.ವಿ. ಚಾನೆಲ್‌ಗಳ ವಿಶೇಷ ವರದಿಗಳು ಇದಕ್ಕೆ ಮೂಕಸಾಕ್ಷಿಯಾಗಿವೆ. ಈ ಎಲ್ಲ ಸ್ಥಿತಿಗತಿಗಳ ಹಿನ್ನೆಲೆಯಲ್ಲಿ ಕೇಂದ್ರ ಸರ್ಕಾರ ಒಂದು ನೂತನ ಸಮಗ್ರವಾದ ಮಸೂದೆಯನ್ನು ಜಾರಿಗೆ ತರಲು ಉದ್ದೇಶಿಸಿತು. ಅದೆಂದರೆ ಕೌಟುಂಬಿಕ ಹಿಂಸಾಚಾರದಿಂದ ಮಹಿಳೆಯರಿಗೆ ರಕ್ಷಣೆ ವಿಧೇಯಕ 2005 : ಇದರ ಮುಖ್ಯಾಂಶಗಳೆಂದರೆ

(1) ಈ ವಿಧೇಯಕವು 'ಮಹಿಳೆ' ಎಂಬ ಪದಕ್ಕೆ ಸಾಕಷ್ಟು ವ್ಯಾಪಕ ಅರ್ಥವನ್ನು ನೀಡುತ್ತದೆ. ಸಾಮಾನ್ಯ ಕೌಟುಂಬಿಕ ಸಂಬಂಧ ಹೊಂದಿದ ಎಲ್ಲ ರೀತಿಯ ಮಹಿಳೆಯರು ಈ ವ್ಯಾಖ್ಯಾನದ ವ್ಯಾಪ್ತಿಗೆ ಒಳಪಡುತ್ತಾರೆ. ಇದೊಂದು ಪ್ರಶಂಸನೀಯ ಕ್ರಮ (ಒಂಟಿ ಸ್ತ್ರೀ ಉದಾ.: ವಿಧವೆ/ವಿಚ್ಛೇದಿತೆ/ವೃದ್ಧೆ/ನಿರಾಶ್ರಿತೆ)

(2) ಹಾಗೆಯೇ 'ಹಿಂಸಾಚಾರ' ಎಂಬ ಪದವು ಕೂಡ ವಿಸ್ತೃತ ವ್ಯಾಖ್ಯಾನ ಪಡೆದಿದೆ. ಇದರಲ್ಲಿ ದೈಹಿಕ, ಲೈಂಗಿಕ, ಮೌಖಿಕ, ಭಾವನಾತ್ಮಕ, ಆರ್ಥಿಕ ಹಾಗೂ ಮಾನಸಿಕ ಕಿರುಕುಳ/ದಬ್ಬಾಳಿಕೆಗಳು ಸೇರಿವೆ. ಉದಾ.: ಬೈಯ್ಯುವುದು, ಹೊಡೆಯುವುದು, ಹಂಗಿಸುವುದು, ಅಪಮಾನಿಸುವುದು, ಅಸಭ್ಯವಾಗಿ ವರ್ತಿಸುವುದು, ಹೆದರಿಕೆ ಬೆದರಿಕೆ ಒಡ್ಡುವುದು ಇತ್ಯಾದಿ.

(3) ಈ ವಿಧೇಯಕವು ಮಹಿಳೆಯರಿಗೆ ಎರಡು ನಿರ್ದಿಷ್ಟ ವಿಶೇಷ ಹಕ್ಕುಗಳನ್ನು ನೀಡುತ್ತದೆ. ಅವುಗಳೆಂದರೆ,

(ಎ) ವರದಕ್ಷಿಣೆ ಸಂಬಂಧಿತ ಹಿಂಸಾಚಾರ / ಕಿರುಕುಳದ ವಿರುದ್ಧ ರಕ್ಷಣೆಯ ಹಕ್ಕು.

(ಬಿ) ಮಹಿಳೆಯು ತನ್ನ ಗಂಡನ ಮನೆಯಲ್ಲಿ ತವರು ಮನೆಯಲ್ಲಿ / ಅವಿಭಕ್ತ ಕುಟುಂಬದಲ್ಲಿ ಸ್ವತಂತ್ರವಾಗಿ, ಸುರಕ್ಷಿತವಾಗಿ ಮತ್ತು ಗೌರವದಿಂದ ವಾಸಿಸುವ ಹಕ್ಕು.

(4) ಈ ವಿಧೇಯಕರಡಿಯಲ್ಲಿ ಸಕ್ಷಮ ನ್ಯಾಯಾಧೀಶರಿಂದ ಸಂತ್ರಸ್ತ ಮಹಿಳೆ ರಕ್ಷಣಾ ಆದೇಶವನ್ನು ಪಡೆಯಬಹುದು. ಇಂತಹ ಆದೇಶವು ಕೆಳಗಿನ ಪರಿಣಾಮವನ್ನು ಹೊಂದಿದೆ.

(ಎ) ಸಂಬಂಧಪಟ್ಟ ಆರೋಪಿಯು / ದೌರ್ಜನ್ಯಕಾರ ತನ್ನ ಕಿರುಕುಳ ಕೃತ್ಯವನ್ನು ತಕ್ಷಣವೇ ನಿಲ್ಲಿಸತಕ್ಕದ್ದು.

(ಬಿ) ಸಂತ್ರಸ್ತ ಮಹಿಳೆ / ಪಿರ್ಯಾದುದಾರ ವಾಸಿಸುವ ಸ್ಥಳಕ್ಕೆ / ಕೆಲಸ ಮಾಡುವ ಸ್ಥಳಕ್ಕೆ ಆರೋಪಿಯು ಭೇಟಿ ನೀಡುವಂತಿಲ್ಲ.

(ಸಿ) ಸಂತ್ರಸ್ತ ಮಹಿಳೆಯೊಂದಿಗೆ ಯಾವುದೆ ತೆರನಾದ ಸಂಪರ್ಕ ಮಾಡುವಂತಿಲ್ಲ.

(ಡಿ) ಸಂತ್ರಸ್ತ ಮಹಿಳೆಯನ್ನು ಅವಳ 'ಕಾನೂನುಬದ್ಧ' ಆಸ್ತಿಯಿಂದ ಪ್ರತ್ಯೇಕಿಸುವ ಅಥವಾ ಅವಳಿಗೆ ಸಹಾಯ/ ನೆರವು ನೀಡುತ್ತಿರುವ ಯಾವುದೇ ವ್ಯಕ್ತಿ ಸಂಸ್ಥೆಗೆ ಬೆದರಿಕೆ ಹಾಕುವುದು/ ಹಿಂಸಿಸುವ ಕೃತ್ಯಕ್ಕೆ ಆರೋಪಿಯು ಪ್ರಯತ್ನಿಸಬಹುದು.

(6) ಸರ್ಕಾರವು ಈ ವಿಧೇಯಕದ ಜಾರಿಗೊಳಿಸುವಿಕೆಗಾಗಿ ಪ್ರತ್ಯೇಕ ರಕ್ಷಣಾಧಿಕಾರಿಗಳನ್ನು ನೇಮಿಸುತ್ತದೆ.

ಈ ವಿಧೇಯಕವು ಹಲವು ಪ್ರತಿಕ್ರಿಯೆಗಳಿಗೆ ಹಾಗೂ ವಿಮರ್ಶೆಗೆ ಗುರಿಯಾಯಿತು. ಆದರೂ ಮಹಿಳೆಯ ಮೇಲಿನ ಹಲವು ಶೋಷಣೆಗಳನ್ನು ತಡೆಯುವ ನಿಟ್ಟಿನಲ್ಲಿ 2005ರಲ್ಲಿ ಕೌಟುಂಬಿಕ ಹಿಂಸೆ ನಿರೋಧ ಕಾಯಿದೆಯನ್ನು ಪಾಸು ಮಾಡಲಾಯಿತು. ಇದರ ಪ್ರಕಾರ ಒಬ್ಬ ಪುರುಷನು ತನ್ನ ಹೆಂಡತಿಯನ್ನು ಹಿಂಸಿಸಿದರೆ ಅಥವಾ ಅವಮಾನಗೊಳಿಸಿದರೆ ಅದು ಶಿಕ್ಷಾರ್ಹ ಅಪರಾಧವಾಗುತ್ತದೆ. ಅಂತಹ ವ್ಯಕ್ತಿಗೆ ಜೈಲುಶಿಕ್ಷೆ ಹಾಗೂ 20,000 ರೂ.ವರೆಗೆ ದಂಡವನ್ನು ವಿಧಿಸಲಾಗುತ್ತಿದೆ. ಇದೊಂದು ಸರ್ಕಾರದ ಮಹಿಳಾಪರ ಕಾಳಜಿ ಹಾಗೂ ಬದ್ಧತೆಯನ್ನು ಹೇಳುತ್ತದೆ. ನೋವಿನ ಬದುಕಿಗೆ ನೆಮ್ಮದಿಯ ಮುನ್ನುಡಿ ಬರೆದಂತೆ ಮಹಿಳಾ ಸಬಲೀಕರಣಕ್ಕೆ ಪುಷ್ಠಿ ನೀಡಿದೆ ಎಂದು ಹಲವು ನಿಟ್ಟಿನ ಉತ್ತರಗಳೂ ಬಂದವು. ಆದರೆ ಮಹಿಳೆಯ ಮೇಲಿನ ದೌರ್ಜನ್ಯ ನಿಲ್ಲಲಿಲ್ಲ. ಪತಿಯ ವಿರುದ್ಧ ದೂರು ಸಲ್ಲಿಸುವ ಹಕ್ಕನ್ನು ಮಾತ್ರ ಪಡೆದಳು. ಆದರೆ ದೂರಿಗೆ ಸರಿಯಾದ ಪ್ರತಿಫಲ ಸಿಗುತ್ತಿಲ್ಲ. ನಿಲ್ಲಬೇಕಾದರೆ ಮಹಿಳೆಯರ ಕುರಿತಾದ ಸಮಾಜದ, ವಿಶೇಷವಾಗಿ ಪುರುಷರ ದೃಷ್ಟಿಕೋನ ಬದಲಾಗಬೇಕು ಮತ್ತು ಮಹಿಳೆಯರಲ್ಲಿ ಜಾಗೃತಿ ಸಂಘಟನೆಗಳು ಪ್ರಬಲವಾಗಬೇಕು. ಇದಕ್ಕೆ ಶಾಶ್ವತ ಪರಿಹಾರವೆಂದರೆ ಮಹಿಳಾ ಸಬಲೀಕರಣ ಮತ್ತು ಸಂಘಟಿತ ಮಹಿಳಾವಾದಿ ಹೋರಾಟಗಳು ಅಗತ್ಯ. ಆಗ ಮಾತ್ರ ಆಕೆ ಪಡೆಯುವ ಹಕ್ಕುಗಳನ್ನು ಸಮರ್ಪಕವಾಗಿ ಪಡೆಯಲು ಸಾಧ್ಯ.

# ಅಧ್ಯಾಯ – 5

## ಸಂವಿಧಾನಾತ್ಮಕ ಮತ್ತು ಸಾಮಾಜಿಕ ಹಕ್ಕುಗಳ ಮುಖಾಮುಖಿ

### ಮಹಿಳೆಯರಿಗೆ ಕಾನೂನುಬದ್ಧ ಹಕ್ಕುಗಳು

ಭಾರತ ಸಂವಿಧಾನದ ಪೀಠಿಕೆ, ಮೂಲಭೂತ ಹಕ್ಕುಗಳು ಮತ್ತು ರಾಜನೀತಿಯ ತತ್ವಗಳು ಈ ಮೂರು ಒಂದಾಗಿ ಕಲ್ಯಾಣ ರಾಜ್ಯವೊಂದರಲ್ಲಿ ಪ್ರತಿಯೊಬ್ಬ ನಾಗರೀಕರಿಗೆ ಸಮಾನವಾದ ಘನತೆ ಮತ್ತು ಸ್ಥಾನಮಾನಗಳ ಭರವಸೆ ನೀಡಿವೆ. ಸಂವಿಧಾನದ ಸತ್ವಗಳನ್ನು ಅದರ ಪ್ರಸ್ತಾವನೆಯಲ್ಲಿ ನಿರೂಪಿಸಲಾಗಿದೆ.

ಮೂಲಭೂತ ಹಕ್ಕುಗಳು : ಭಾರತ ಸಂವಿಧಾನವು ಈ ಕೆಳಗಿನ ಮೂಲಭೂತ ಹಕ್ಕುಗಳನ್ನು ಕೊಟ್ಟಿದೆ.

ಎ) **ಸಮಾನತೆ ಹಕ್ಕು** : ಭಾರತದ ಭೌಗೋಳಿಕ ಪ್ರದೇಶದೊಳಗೆ ಕಾನೂನಿನ ಮುಂದೆ ಸಮಾನತೆಯ ಹಕ್ಕು ಮತ್ತು ಕಾನೂನನ್ನು ಸಮಾನವಾಗಿ ಸಂರಕ್ಷಿಸುವ ಹಕ್ಕನ್ನು 14ನೇ ಪರಿಚ್ಛೇದವು ಖಾತರಿಗೊಳಿಸುತ್ತದೆ.

ಬಿ) **ತಾರತಮ್ಯವಿಲ್ಲದ ಹಕ್ಕು** : ಮತ–ಜನಾಂಗ–ಜಾತಿ–ಲಿಂಗ ಅಥವಾ ಜನ್ಮ ಸ್ಥಳಗಳ ನೆಲೆಯಲ್ಲಿ ತಾರತಮ್ಯ ಎಸಗುವುದನ್ನು 15ನೇ ಪರಿಚ್ಛೇದವು ನಿಷೇಧಿಸುತ್ತದೆ.

ಸಿ) **ದೃಢೀಕರಿಸುವ ಕ್ರಮ** : ಮಹಿಳೆಯರು ಮತ್ತು ಮಕ್ಕಳಿಗೆ ವಿಶೇಷ ಸವಲತ್ತು ಒದಗಿಸುವ ನಿಟ್ಟಿನಲ್ಲಿ 15(3)ನೇ ಪರಿಚ್ಛೇದವು ಸರಕಾರಕ್ಕೆ ಅಧಿಕಾರ.

ಡಿ) **ಉದ್ಯೋಗದಲ್ಲಿ ಸಮಾನತೆಯ ಹಕ್ಕು** : ಸಾರ್ವಜನಿಕ ಔದ್ಯೋಗಿಕ ರಂಗದಲ್ಲಿ ಸಮಾನ ಅವಕಾಶಗಳ ಹಕ್ಕನ್ನು 16ನೇ ಪರಿಚ್ಛೇದವು ಒದಗಿಸುತ್ತದೆ.

ಇ) **ಉದ್ಯೋಗದಲ್ಲಿ ಎಫರ್ಮೇಟಿವ್ ಆ್ಯಕ್ಷನ್** : 16(4)ನೇ ಪರಿಚ್ಛೇದವು ಹಿಂದುಳಿದ ವರ್ಗದ ಪ್ರಜೆಗಳಿಗೆ ಸರಕಾರದ ಅಭಿಪ್ರಾಯದಂತೆ ರಾಜ್ಯದ ಸರಕಾರಿ ಸೇವೆಯಲ್ಲಿ ಸಾಕಷ್ಟು ಪ್ರಾತಿನಿಧ್ಯ ದೊರೆಯದಿದ್ದಲ್ಲಿ ಅವರಿಗೆ ಉದ್ಯೋಗದಲ್ಲಿ ಮೀಸಲಾತಿ ನೀಡುವುದಕ್ಕೆ ಸರಕಾರಕ್ಕೆ ಅಧಿಕಾರ ನೀಡುತ್ತದೆ.

ಎಫ್) **ಶಿಕ್ಷಣದ ಹಕ್ಕು** : 6 ರಿಂದ 14 ವರ್ಷ ವಯಸ್ಸಿನ ಎಲ್ಲಾ ಮಕ್ಕಳಿಗೆ ಉಚಿತ ಮತ್ತು ಕಡ್ಡಾಯ ಶಿಕ್ಷಣ ಒದಗಿಸುವ ಜವಾಬ್ದಾರಿ ಸರಕಾರದ್ದು.

**ಸ್ವಾತಂತ್ರ್ಯದ ಹಕ್ಕು** : 19ನೇ ಪರಿಚ್ಛೇದವು ತಿಳಿಯಪಡಿಸುವುದೇನೆಂದರೆ ವಾಕ್ ಮತ್ತು ಅಭಿವ್ಯಕ್ತಿ ಸ್ವಾತಂತ್ರ್ಯ, ಶಸ್ತ್ರರಹಿತವಾಗಿ ಮತ್ತು ಶಾಂತಿಯುತವಾಗಿ ಸಭೆ ಸೇರುವುದು, ಸಂಘ ಅಥವಾ ಸಂಘಟನೆಗಳನ್ನು ರಚಿಸುವುದು ಭಾರತದ ಗಡಿಯೊಳಗೆ ಸ್ವತಂತ್ರವಾಗಿ ಸಂಚರಿಸುವುದು, ಭಾರತದ ಗಡಿಯೊಳಗೆ ಯಾವುದೇ ಭಾಗದಲ್ಲಿ ನೆಲೆ ನಿಂತು ವಾಸಿಸುವುದು, ಯಾವುದೇ ಉದ್ಯೋಗ ವ್ಯಾಪಾರ ವ್ಯವಹಾರಗಳನ್ನು ವೃತ್ತಿಯಾಗಿ ಅನುಸರಿಸಿಕೊಂಡು ಹೋಗುವುದು.

ಪ್ರಜೆಗಳು ತಮ್ಮ ಮೂಲಭೂತ ಹಕ್ಕುಗಳು ಹಾಗೂ ಸ್ವಾತಂತ್ರ್ಯಗಳನ್ನು ಅನುಭವಿಸವಂತಾಗಲು ಸೂಕ್ತ ಪರಿಸರ ಸೃಷ್ಟಿ ಮಾಡುವಂಥ ಧೋರಣೆಗಳನ್ನು ಬಳಸಿಕೊಳ್ಳುವ ಅಧಿಕಾರವನ್ನು ಸಂವಿಧಾನವು ಸರಕಾರಕ್ಕೆ ವಹಿಸಿಕೊಟ್ಟಿದೆ. ಮಹಿಳೆಯರ ಹಕ್ಕುಗಳಿಗೆ ಸಂಬಂಧಿಸಿದ ರಾಜ್ಯ ನಿರ್ದೇಶನ ತತ್ವಗಳು ಈ ಕೆಳಗಿನಂತಿವೆ.

**38ನೇ ಪರಿಚ್ಛೇದ :** ಈ ಕೆಳಗಿನ ಅಂಶಗಳನ್ನು ರೂಪಿಸುವ ನಿಟ್ಟಿನಲ್ಲಿ ನಿರ್ದಿಷ್ಟ ನೀತಿಗಳ ತತ್ವವನ್ನು ಅನುಸರಿಸಲು ಸರಕಾರಕ್ಕೆ ಅಧಿಕೃತ ಆದೇಶ ನೀಡುತ್ತದೆ.

(1) ಮಹಿಳೆಯರಿಗೆ ಮತ್ತು ಪುರುಷರಿಗೆ ತಮಗೆ ಅಗತ್ಯವಿರುವ, ಬದುಕುವ ವಿಧಾನಗಳನ್ನು ಪಡೆದುಕೊಳ್ಳುವ ಸಮಾನ ಹಕ್ಕುಗಳಿವೆ.

(2) ಸಮಾನ ಹಿತಾಸಕ್ತಿಗಳನ್ನು ಕಾಯ್ದುಕೊಳ್ಳುವುದಕ್ಕೆ ಸಮುದಾಯದ ಭೌತಿಕ ಸಂಪನ್ಮೂಲಗಳ ಒಡೆತನ ಮತ್ತು ನಿಯಂತ್ರಣದಲ್ಲಿ ಸೂಕ್ತ ಪಾಲುಗಾರಿಕೆ.

(3) ಧೋರಣೆಗಳು ಸಂಪತ್ತಿನ ಮತ್ತು ಉತ್ಪಾದನಾ ವಿಧಾನಗಳ ಕೇಂದ್ರೀಕರಣದಿಂದ ಸಾರ್ವತ್ರಿಕವಾಗಿ ಮಾಡುವಂತೆ ಖಾತರಿಪಡಿಸುವುದು.

(4) ಮಹಿಳೆ ಮತ್ತು ಪುರುಷ ಇಬ್ಬರಿಗೂ ಸಮಾನ ಕೆಲಸಕ್ಕೆ ಸಮಾನ ವೇತನ.

(5) ಕೆಲಸಗಾರನ ಶಕ್ತಿ ಮತ್ತು ಆರೋಗ್ಯ, ಮಹಿಳೆ ಮತ್ತು ಪುರುಷ ಎಂಬ ಕಾರಣಕ್ಕೆ ದೌರ್ಜನ್ಯಕ್ಕೆ ಈಡಾಗಬಾರದು. ಅಲ್ಲದೇ ಪ್ರಜೆಗಳು ಆರ್ಥಿಕ ದಾರಿದ್ರ್ಯದ ಕಾರಣವಾಗಿ ತಮ್ಮ ವಯಸ್ಸು ಮತ್ತು ಸಾಮರ್ಥ್ಯಕ್ಕೆ ಹೊಂದದಿರುವ ದಂಧೆಗೆ ತಳ್ಳಲ್ಪಡಬಾರದು.

(6) ಮಕ್ಕಳ ಅಭಿವೃದ್ಧಿಗಾಗಿ ಅವಕಾಶಗಳನ್ನು ಮತ್ತು ಸೌಲಭ್ಯಗಳನ್ನು ಒದಗಿಸಬೇಕು ಹಾಗೂ ಶೋಷಣೆಯ ವಿರುದ್ಧ ಅಲ್ಲದೆ ನೈತಿಕ, ಭೌತಿಕ ತ್ಯಜಿಸುವಿಕೆ ವಿರುದ್ಧ ಬಾಲ್ಯತನ ಮತ್ತು ಯೌವ್ವನವನ್ನು ರಕ್ಷಿಸುವುದು.

**ಪರಿಚ್ಛೇದ 39(ಎ) :**

ಸಮಾನ ನ್ಯಾಯ ಮತ್ತು ಉಚಿತ ಕಾನೂನು ನೆರವು ಆರ್ಥಿಕ ಅಥವಾ ಇತರ ಅಶಕ್ತಿಯ ಕಾರಣವಾಗಿ ನ್ಯಾಯ ಪಡೆಯುವ ಅವಕಾಶಗಳನ್ನು ಅಲ್ಲಗಳೆಯಬಾರದು.

**ಪರಿಚ್ಛೇದ 41 :**

ಕೆಲಸ, ಶಿಕ್ಷಣ ಮತ್ತು ನಿರುದ್ಯೋಗ, ಮುಪ್ಪು, ಕಾಯಿಲೆ ಮತ್ತು ಅಶಕ್ತತೆ ಮತ್ತು ಇತರ ಅರ್ಹ ಪ್ರಕರಣಗಳಲ್ಲಿ ಕೆಲಸದ ಹಕ್ಕು, ಶಿಕ್ಷಣದ ಹಕ್ಕು ಮತ್ತು ಸಾರ್ವಜನಿಕ ಸೌಲಭ್ಯಗಳನ್ನು ಪಡೆದುಕೊಳ್ಳುವ ಹಕ್ಕು.

**ಪರಿಚ್ಛೇದ 42 :**

ನ್ಯಾಯ ಸಮ್ಮತ ಮತ್ತು ಮಾನವೀಯ ಕೆಲಸದ ಪರಿಸ್ಥಿತಿಯನ್ನು ಒದಗಿಸುವುದು ಮತ್ತು ಹೆರಿಗೆ ಭತ್ಯೆ.

ಪರಿಚ್ಛೇದ 43 : ಸರ್ಕಾರವು ಎಲ್ಲಾ ಕಾರ್ಮಿಕರಿಗೆ ಜೀವಿಸುವ ವೇತನ, ಸಂಭಾವಿತ ಜೀವನ ಮಟ್ಟವನ್ನು ಕಾಯ್ದುಕೊಳ್ಳುವ ಪರಿಸ್ಥಿತಿ ಮತ್ತು ಬಿಡುವಿನ ಸಮಯವನ್ನು ಪರಿಪೂರ್ಣವಾಗಿ ಆನಂದಿಸುವ ಹಾಗೂ ಸಾಮಾಜಿಕ, ಸಾಂಸ್ಕೃತಿಕ ಅವಕಾಶಗಳನ್ನು ಒದಗಿಸಿಕೊಡಬೇಕು.

**ಪರಿಚ್ಛೇದ 43 (ಎ) :**

ಕೈಗಾರಿಕೆಗಳ ಆಡಳಿತ ನಿರ್ವಹಣೆಯಲ್ಲಿ ಕಾರ್ಮಿಕರ ಭಾಗವಹಿಸುವಿಕೆಯನ್ನು ಖಾತರಿಗೊಳಿಸುವುದು. ಕೆಲಸಗಾರರು ಯಾವುದೇ ಕೈಗಾರಿಕೆಯ ಸಂಘಟನೆಯಲ್ಲಿ ತೊಡಗಿಸಿಕೊಳ್ಳುವ ಅಥವಾ ಸಾರ್ವಜನಿಕ ಉದ್ದಿಮೆಗಳ ಮತ್ತು ಮುಂಗಟ್ಟುಗಳ ಆಡಳಿತದಲ್ಲಿ ಭಾಗವಹಿಸುವುದನ್ನು ಖಾತರಿಗೊಳಿಸಲು ಸರಕಾರವು ಅವಶ್ಯಕ ಶಾಸನಾತ್ಮಕ ಕ್ರಮಗಳನ್ನಾಲಿಸಿ ಅಥವಾ ಅಂತಹ ಯಾವುದಾದರೂ ಕ್ರಮಗಳನ್ನು ಕೈಗೊಳ್ಳಬೇಕು.

**ಪರಿಚ್ಛೇದ 51 (ಎ) (ಇ) :**

ಮಹಿಳೆಯರ ಘನತೆಗೆ ಕುಂದನ್ನುಂಟು ಮಾಡುವಂತಹ ಪ್ರವೃತ್ತಿಗಳನ್ನು ಸಾಂಪ್ರದಾಯಗಳನ್ನು ತಡೆಯುವುದು.

**ಪರಿಹಾರ :**

ಒಂದು ವೇಳೆ ಮೂಲಭೂತ ಹಕ್ಕುಗಳು ಮತ್ತು ಸ್ವಾತಂತ್ರ್ಯದ ಉಲ್ಲಂಘನೆಯಾದಲ್ಲಿ ಅವುಗಳನ್ನು ಸರಿಪಡಿಸುವ ಸಾಂಸ್ಕೃತಿಕ ಕಾರ್ಯ ವ್ಯವಸ್ಥೆಯನ್ನು ಭಾರತ ಸಂವಿಧಾನವು ಒದಗಿಸಿಕೊಟ್ಟಿದೆ.

**ಪರಿಚ್ಛೇದ 32:**

ಮೂಲಭೂತ ಹಕ್ಕುಗಳನ್ನು ಜಾರಿಗೊಳಿಸುವ ಅಧಿಕಾರವನ್ನು ಭಾರತದ ಸರ್ವೋಚ್ಚ ನ್ಯಾಯಾಲಯಕ್ಕೆ ನೀಡಿದೆ ಹಾಗೂ ರಾಜ್ಯದ ಹೈಕೋರ್ಟ್‌ಗಳಿಗೆ 226 ಮತ್ತು 227ರ 32ನೇ ಪರಿಚ್ಛೇದದಲ್ಲಿ ನೀಡಲಾಗಿದೆ.

**ಸಾರ್ವಜನಿಕ ಹಿತಾಸಕ್ತಿ ದಾವೆ :**

ಸಮುದಾಯದ ಅಥವಾ ಜನರ ಗುಂಪುಗಳ ಹಕ್ಕುಗಳು ಉಲ್ಲಂಘನೆಯಾದಾಗ, ಆ ಹಕ್ಕುಗಳನ್ನು ಜಾರಿ ಮಾಡುವಂಎ ಉಚ್ಚ ನ್ಯಾಯಾಲಯ ಅಥವಾ ಸರ್ವೋಚ್ಚ ನ್ಯಾಯಾಲಯದಲ್ಲಿ ಒಂದು ದೂರು ದಾಖಲಿಸುವುದು.

ಈ ಮೇಲಿನವುಗಳಲ್ಲದೇ ಸ್ಥಾಪಿಸಲಾಗಿರುವ ಇತರ ನ್ಯಾಯಾಲಯಗಳು ಈ ಕೆಳಕಂಡಂತಿವೆ.

ಸಿವಿಲ್ ವಿವರಗಳನ್ನು ಇತ್ಯರ್ಥಗೊಳಿಸುವ ಉದ್ದೇಶದಿಂದ ಎಲ್ಲಾ ತಾಲ್ಲೂಕು ಮತ್ತು ಜಿಲ್ಲಾಮಟ್ಟದಲ್ಲಿ ಸಿವಿಲ್ ನ್ಯಾಯಾಲಯಗಳನ್ನು ಸ್ಥಾಪಿಸಲಾಗಿದೆ.

ವಿವಾಹ ವಿಚ್ಛೇದನ, ಮಕ್ಕಳ ಅಭಿರಕ್ಷೆ, ಜೀವನಾಂಶ ಮೊದಲಾದ ವಿಚಾರಗಳಿಗೆ ಸಂಬಂಧಿಸಿದವುಗಳನ್ನು ಇತ್ಯರ್ಥಗೊಳಿಸುವುದಾಗಿ ಕೌಟುಂಬಿಕ ನ್ಯಾಯಾಲಯಗಳನ್ನು ಸ್ಥಾಪಿಸಲಾಗಿದೆ. ಎಲ್ಲೆಲ್ಲೂ ಕೌಟುಂಬಿಕ ನ್ಯಾಯಾಲಯಗಳನ್ನು ಸ್ಥಾಪಿಸಲಾಗಿಲ್ಲವೋ ಅಲ್ಲಿ ಇವುಗಳಿಗೆ ಸಂಬಂಧಿಸಿದ ಪ್ರಕರಣಗಳನ್ನು ಜಿಲ್ಲಾ ಸಿವಿಲ್ ನ್ಯಾಯಾಲಯವೇ ವಿಚಾರಣೆ ನಡೆಸುವ ಅಧಿಕಾರವನ್ನು ಹೊಂದಿರುತ್ತದೆ. ಕಾರ್ಮಿಕರಿಗೆ ಅನುಕೂಲವಾಗುವಂತೆ ಅವರ ಉದ್ಯೋಗ ಮತ್ತು ಸೇವೆ ಮತ್ತಿತ್ತರ ವಿಚಾರಗಳಿಗೆ ಸಂಬಂಧಿಸಿದಂತೆ ಪರಿಹಾರ ಪಡೆದುಕೊಳ್ಳಲು ಕಾರ್ಮಿಕ ನ್ಯಾಯಾಲಯಗಳನ್ನು ಸ್ಥಾಪಿಸಲಾಗಿದೆ.

**ಅಂತರ್ ರಾಷ್ಟೀಯ ಒಪ್ಪಂದಗಳ ಮೂಲಕ ಮಹಿಳಾ ಹಕ್ಕುಗಳು :**

ಸರಕಾರದೊಂದಿಗೆ ತಮ್ಮ ಹಕ್ಕುಗಳನ್ನು ಪಡೆದುಕೊಳ್ಳಲು ಮತ್ತು ಅವುಗಳನ್ನು ಕೊಡುವಂತೆ ಮಾಡವಲ್ಲಿ ಸಂವಿಧಾನ ಹೊರತಾಗಿಯೂ ಹಲವು ಅಂತರ್ ರಾಷ್ಟೀಯ ಮಾನವ ಹಕ್ಕುಗಳ ಒಪ್ಪಂದಗಳು ನಾಗರೀಕರಿಗೆ ಸಾಧನಗಳಂತಿವೆ.

(1) ಮಾನವ ಹಕ್ಕುಗಳ ಸಾರ್ವತ್ರಿಕ ಘೋಷಣೆ

(The Universal Declaration of Human rights - UDHR)

(2) ನಾಗರೀಕ ಮತ್ತು ರಾಜಕೀಯ ಹಕ್ಕುಗಳ ಅಂತರ್‌ರಾಷ್ಟೀಯ ಕರಾರು

(ICCPR)

(3) ಆರ್ಥಿಕ, ಸಾಮಾಜಿಕ ಮತ್ತು ಸಾಂಸ್ಕೃತಿಕ ಹಕ್ಕುಗಳ ಅಂತರ್‌ರಾಷ್ಟೀಯ ಕರಾರು (ICESCR) 1966ರಲ್ಲಿ ವಿಶ್ವಸಂಸ್ಥೆಯ ಜನರಲ್ ಅಸೆಂಬ್ಲಿಲ್ಲಿ ಅಂಗೀಕೃತವಾಗಿದ್ದು, ಭಾರತವು 10–4–1979ರಲ್ಲಿ ಇದಕ್ಕೆ ಸಹಿ ಮಾಡಿದೆ.

(4) ಮಹಿಳೆಯರ ವಿರುದ್ಧ ಎಲ್ಲಾ ರೀತಿಯ ತಾರತಮ್ಯಗಳನ್ನು ತೊಡೆದು ಹಾಕುವ ಅಂತರ್ ರಾಷ್ಟೀಯ ಒಡಂಬಡಿಕೆ (The convention of the Elemination of Descrimination against women - CEDAW) 1979ರಲ್ಲಿ ವಿಶ್ವಸಂಸ್ಥೆಯ ಜನರಲ್ ಅಸೆಂಬ್ಲಿಯಲ್ಲಿ ಇದನ್ನು ಅಂಗೀಕರಿಸಲಾಗಿದೆ ಮತ್ತು ಭಾರತವು 1980ರಲ್ಲಿ ಇದಕ್ಕೆ ಸಹಿ ಹಾಕಿದೆ. ಅಲ್ಲದೇ 9–7–1993ರ ಒಡಂಬಡಿಕೆಗೆ ಅನುಮೋದನೆ ಮಾಡಿದೆ.

ಮಹಿಳೆಯರ ವಿರುದ್ಧ ಎಲ್ಲಾ ರೀತಿಯ ತಾರತಮ್ಯಗಳನ್ನು ತೊಡೆದು ಹಾಕುವ ಅಂತರ್–ರಾಷ್ಟೀಯ ಒಡಂಬಡಿಕೆ (CEDAW)

ಮಹಿಳೆಯರ ವಿರುದ್ಧ ಎಲ್ಲಾ ರೀತಿಯ ತಾರತಮ್ಯಗಳನ್ನು ತೊಡೆದು ಹಾಕುವ ಅಂತರ್–ರಾಷ್ಟೀಯ ಒಡಂಬಡಿಕೆಯು ಸರಕಾರಗಳ ನಡುವೆ ಆಗಿರುವ ಸಮಗ್ರ ಅಂತಾರಾಷ್ಟೀಯ ಒಪ್ಪಂದವಾಗಿದ್ದು, ಮಹಿಳೆಯರ

ಸ್ಥಿತಿಗತಿಗಳನ್ನು ಅಭಿವೃದ್ಧಿಪಡಿಸುವ ಉದ್ದೇಶ ಹೊಂದಿದೆ. ಈ ಒಡಂಬಡಿಕೆಯು ಮಹಿಳೆಯರ ಹಕ್ಕುಗಳ ಮಸೂದೆಯಾಗಿದೆ. ಮಹಿಳೆಯು ಪುರುಷರಂತೆ ಆರ್ಥಿಕ, ಸಾಮಾಜಿಕ, ಸಾಂಸ್ಕೃತಿಕ, ನಾಗರೀಕ ಮತ್ತು ರಾಜಕೀಯ ಕ್ಷೇತ್ರಗಳಲ್ಲಿ ಸಮಾನತೆಯ ಹಕ್ಕುಗಳನ್ನು ಪಡೆಯಬೇಕೆಂದು ಉತ್ತೇಜಿಸುತ್ತದೆ.

ನಮ್ಮ ಸಂವಿಧಾನ ಅಥವಾ ಇತರ ಕಾನೂನುಗಳು ಮಹಿಳೆಯರ ವಿರುದ್ಧದ ತಾರತಮ್ಯಗಳ ಬಗ್ಗೆ ವಿವರಣೆ ನೀಡದಿರುವ ಸಂದರ್ಭದಲ್ಲಿ ಇದು ಆ ಬಗ್ಗೆ ಸಾರ್ವತ್ರಿಕವಾದ ವ್ಯಾಖ್ಯಾನಗಳನ್ನು ಒದಗಿಸಿರುವುದು ತುಂಬಾ ಉಪಯುಕ್ತವಾಗಿದೆ. ಅದರಲ್ಲಿ ವಿವರಿಸಲಾಗಿರುವ ವಿವಿಧ ಹಕ್ಕುಗಳ ಅಂತಾರಾಷ್ಟ್ರೀಯ ಮಟ್ಟವನ್ನು ಕಾಯ್ದುಕೊಂಡಿವೆ. ಮಹಿಳೆಯರ ವಿರುದ್ಧದ ತಾರತಮ್ಯಗಳನ್ನು ತೊಡೆದು ಹಾಕುವ ನಿಜವಾದ ಸಾಧನಗಳನ್ನು ರೂಪಿಸಿಕೊಳ್ಳುವಲ್ಲಿ ಸರಕಾರವು ಬದ್ಧವಾಗುವಂತೆ ಮಾಡಿದೆ. ಅದರಲ್ಲಿ ಒಳಗೊಂಡಿರುವ ಇತರ ಅವಕಾಶಗಳೆಂದರೆ –

ಎ) ಖಾಸಗಿ ಮತ್ತು ಸಾರ್ವಜನಿಕ ಜೀವನದಲ್ಲಿ ತಾರತಮ್ಯ ಮಾಡುವಂತಿಲ್ಲ.

ಬಿ) ವಿವಿಧ ದೇಶಗಳಲ್ಲಿ ಸ್ತ್ರೀ–ಪುರುಷರ ಪಾತ್ರಗಳ ಬಗ್ಗೆ ಸಾಂಪ್ರದಾಯಿಕವಾಗಿ ಹರಿದು ಬಂದಿರುವ ಮೂಢನಂಬಿಯ ವಿಚಾರಗಳನ್ನು ತೊಡೆದು ಹಾಕಬಹುದು.

ಸಿ) ಸರಕಾರದ ಕ್ರಮಗಳನ್ನು ಜಾರಿ ಮಾಡುವ ಮತ್ತು ಮೇಲುಸ್ತುವಾರಿಕೆ ನಡೆಸುವಂತಹ ಕಾರ್ಯವಿಧಾನವನ್ನು ಅದು ಒದಗಿಸಿಕೊಟ್ಟಿದೆ.

ಇದಕ್ಕಿಂತ ಹೆಚ್ಚಾಗಿ ಮಹಿಳೆಯರ ವಿರುದ್ಧದ ಎಲ್ಲಾ ರೀತಿಯ ತಾರತಮ್ಯಗಳನ್ನು ತೊಡೆದು ಹಾಕವು. ಒಡಂಬಡಿಕೆ ಸಮಿತಿಯ ನ್ಯಾಯನಿರ್ಣಯ ವ್ಯಾಖ್ಯಾನಗಳನ್ನು ಸಾಮಾನ್ಯ ಶಿಫಾರಸ್ಸುಗಳೆಂದು ಕರೆಯಲಾಗುತ್ತಿದ್ದು, ಇವುಗಳನ್ನು ಮಹಿಳೆಯರ ಹಕ್ಕುಗಳನ್ನು ಅರ್ಥೈಸುವಲ್ಲಿ ಸಮಿತಿಗೆ ಮಾರ್ಗದರ್ಶನ ಮಾಡುತ್ತುದೆ. 2006ರ ಜುಲೈನಲ್ಲಿ ವಿವಿಧ ವಿಚಾರಗಳ ಬಗ್ಗೆ ಇಂತಹ ಸುಮಾರು 25 ಸಾಮಾನ್ಯ ಶಿಫಾರಸ್ಸುಗಳಿದ್ದವು. 19ನೇ ಸಾಮಾನ್ಯ ಶಿಫಾರಸ್ಸು ಮಹಿಳಾ ದೌರ್ಜನ್ಯರ ಕುರಿತಾಗಿದೆ.

**ಮಹಿಳಾ ಅಭಿವೃದ್ಧಿ ನಿಗಮಗಳು (Women Development Corportions)**

1990ರ ದಶಕದಲ್ಲಿ ಭಾರತೀಯ ರಾಜ್ಯಗಳ ಮಹಿಳಾ ಅಭಿವೃದ್ಧಿ ನಿಗಮಗಳನ್ನು ಸ್ಥಾಪಿಸಿದವು. ಮಹಿಳೆಯರ ಸಬಲೀಕರಣ ಸಾಧಿಸುವುದು ಈ ನಿಗಮಗಳ ಪರಮ ಉದ್ದೇಶವಾಗಿದೆ. 7ನೇ ಪಂಚವಾರ್ಷಿಕ ಯೋಜನೆಯನ್ನು ಮಹಿಳೆಯರಿಗಾಗಿ ಉದ್ಯೋಗಾವಕಾಶಗಳನ್ನು ಸೃಷ್ಟಿಸುವುದು; ತನ್ಮೂಲಕ ಮಹಿಳೆಯರನ್ನು ರಾಷ್ಟ್ರಾಭಿವೃದ್ಧಿಯ ಮುಖ್ಯವಾಹಿನಿಗೆ ತರುವುದು ಉದ್ದೇಶವಾಗಿತ್ತು. ಈ ದಿಸೆಯಲ್ಲಿ ಮೊತ್ತ ಮೊದಲಿಗೆ ಆಂಧ್ರಪ್ರದೇಶ ಮತ್ತು ತಮಿಳುನಾಡು ರಾಜ್ಯಗಳು ಪ್ರಯತ್ನಶೀಲವಾಗಿದ್ದವು. ಈ ಪ್ರಕಾರ ಮಹಿಳಾ ಅಭಿವೃದ್ಧಿ ನಿಗಮಗಳನ್ನು 8ನೇ ಪಂಚವಾರ್ಷಿಕ ಯೋಜನೆಯಲ್ಲಿ ಇತರೆ ಭಾರತೀಯ ರಾಜ್ಯಗಳು ಸ್ಥಾಪಿಸುವಂತೆ ಕೇಂದ್ರ ಸರ್ಕಾರದ ಮಹಿಳೆ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಮತ್ತು ಕೇಂದ್ರ ಮಾನವ ಸಂಪನ್ಮೂಲ ಅಭಿವೃದ್ಧಿ ಸಚಿವಾಲಯವು ಪ್ರೇರೇಪಿಸಿದವು.

ಮಹಿಳಾ ಅಭಿವೃದ್ಧಿ ನಿಗಮಗಳ ಉದ್ದೇಶಗಳು ಮತ್ತು ಕರ್ತವ್ಯಗಳು ಕೆಳಕಂಡಂತಿವೆ.

1) ಮಹಿಳಾ ಉದ್ಯಮಪತಿಗಳನ್ನು ಗುರುತಿಸುವುದು.

2) ಹೂಡಿಕೆಗೆ ಅರ್ಹವಾದ ಉತ್ಪಾದನಾ ಯೋಜನೆಗಳನ್ನು ಸಿದ್ಧಪಡಿಸುವುದು.

3) ಬ್ಯಾಂಕುಗಳು ಮತ್ತು ಇತರ ಹಣಕಾಸು ಸಂಸ್ಥೆಗಳಿಂದ ಸಾಲ ಹಣ ಲಭ್ಯತೆಯನ್ನು ಉತ್ತೇಜಿಸುವುದು.

4) ಮಾರುಕಟ್ಟೆ ಸಂಬಂಧಗಳನ್ನು ಸ್ಥಾಪಿಸುವುದು.

5) ಪಾಲಿಟೆಕ್ನಿಕ್‌ಗಳು ಮತ್ತು ಐಟಿಐಗಳನ್ನು ಬಳಸಿಕೊಂಡು ತಾಂತ್ರಿಕ ವೃತ್ತಿ ಕೌಶಲ್ಯಗಳನ್ನು ವೃದ್ಧಿಸಲು ಮಹಿಳೆಯರಿಗೆ ತರಬೇತಿ ನೀಡಿಕೆ.

6) ಸೂಕ್ತ ಸಂಸ್ಥೆಗಳ ಮೂಲಕ ಹಣಕಾಸು ನಿರ್ವಹಣೆ ತರಬೇತಿ ನೀಡುವುದು.

7) ತಾಂತ್ರಿಕ ಮಾರ್ಗದರ್ಶನ ಸೇವೆಗಳನ್ನು ಕಲ್ಪಿಸುವುದು.

8) ಮಹಿಳಾ ಸರಕಾರಿ ಸಂಘಗಳನ್ನು ಮತ್ತು ಸಂಸ್ಥೆಗಳನ್ನು ಬಲಪಡಿಸುವುದು.

9) ಬಡ ಮಹಿಳೆಯರಿಗೆ ಏಕವ್ಯಕ್ತಿ ಮಹಿಳೆಯರಿಗೆ ಮತ್ತು ಮಹಿಳೆ ಮುಖ್ಯಸ್ಥೆಯಾಗಿರುವ ಕುಟುಂಬಗಳಿಗೆ ನೆರವಾಗುವುದು.

ಇವುಗಳೆಲ್ಲದರ ಜೊತೆಗೆ ಈಗಾಗಲೇ ತಿಳಿಸಿರುವ ಮಹಿಳೆಯ ಪರ ಕಾನೂನು ಕಾಯ್ದೆಗಳೂ ಸಹ ಆಕೆ ಹಕ್ಕುಗಳ ಪೂರ್ಣ ಬಳಕೆಗೆ ಹೋರಾಡಿವೆ. ಅವುಗಳೆಂದರೆ ವೈವಾಹಿಕ ಕಾನೂನುಗಳಲ್ಲಿ

(1) ವಿಶೇಷ ವಿವಾಹ ಕಾಯಿದೆ – 1945

(2) ಹಿಂದೂ ವಿವಾಹ ಕಾಯಿದೆ – 1955

(3) ಹಿಂದೂ ದತ್ತಕ ಮತ್ತು ಜೀವನಾಂಶ ಕಾಯಿದೆ – 1956

(4) ಹಿಂದೂ ಉತ್ತರಾಧಿಕಾರ ಕಾಯಿದೆ – 1956

(5) ಸಂರಕ್ಷಕರ ಮತ್ತು ಪ್ರತಿಪಾದಿತರ ಅಧಿನಿಯಮ ಕಾಯಿದೆ – 1860

(6) ವಿದೇಶಿ ವಿವಾಹ ಕಾಯಿದೆ – 1969

(7) ಕ್ರೈಸ್ತ ವಿವಾಹ ಕಾಯಿದೆ – 1872

(8) ಭಾರತೀಯ ವಿಚ್ಛೇದನ ಕಾಯಿದೆ – 1869

(9) ಭಾರತೀಯ 'ವಂಶಪಾರಂಪರಿಕ ಹಕ್ಕು' – 1925

(10) ಬಾಲ್ಯವಿವಾಹ ತಡೆ ಕಾಯಿದೆ – 1929

(11) ಮುಸ್ಲಿಂ ವೈಯಕ್ತಿಕ ಕಾನೂನು ಅನ್ವಯ ಕಾಯಿದೆ – 1937

(12) ಮುಸ್ಲಿಂ ವಿವಾಹ ರದ್ಧತಿ ಕಾಯಿದೆ – 1939

(13) ಮುಸ್ಲಿಂ ಮಹಿಳಾ (ವಿಚ್ಛೇದನ ಮೇಲಿನ ಹಕ್ಕುಗಳ ರಕ್ಷಣೆ) ಕಾಯಿದೆ – 1986

(14) ಕೌಟುಂಬಿಕ ನ್ಯಾಯಾಲಯಗಳ ಕಾಯಿದೆ – 1984

## ಕ್ರಿಮಿನಲ್ ಮತ್ತು ಪೀನಲ್ ಕಾನೂನುಗಳು

(1) ಭಾರತೀಯ ದಂಡಸಂಹಿತೆ – 1980

(2) ನೀತಿಬಾಹಿರ ಸಾಗಾಣಿಕೆ (ತಡೆ) ಕಾಯಿದೆ – 1956

(3) ವರದಕ್ಷಿಣೆ ನಿಷೇಧ ಕಾಯಿದೆ – 1961

(4) ಮಹಿಳಾ ಅಸಭ್ಯ ರೂಪಣ (ನಿಷೇಧ) ಕಾಯಿದೆ – 1982

(5) ಕರ್ನಾಟಕ ದೇವದಾಸಿ (ಅರ್ಪಣಾ ನಿಷೇಧ) ಕಾಯಿದೆ – 1982

(6) ಜವನ್ಯೈಲ್ ಜಸ್ಟೀಸ್ ಕಾಯಿದೆ – 1986

## ಕಾರ್ಮಿಕ ಕಾಯಿದೆಗಳು

(1) ಕಾರ್ಖಾನೆಗಳ ಕಾಯಿದೆ – 1948

(2) ಕನಿಷ್ಠ ವೇತನ ಕಾಯಿದೆ – 1948

(3) ಹೆರಿಗೆ ಸೌಲಭ್ಯ ಕಾಯಿದೆ – 1961

(4) ಜೀತಪದ್ಧತಿ (ರದ್ಧತಿ) ಕಾಯಿದೆ – 1979

(5) ಬಾಲಕಾರ್ಮಿಕ ಪದ್ಧತಿ (ನಿಷೇಧ ಮತ್ತು ನಿಯಂತ್ರಣ) ಕಾಯಿದೆ – 1986

(6) ಸಮಾನ ಸಂಭಾವನೆಯ ಕಾಯಿದೆ – 1976

(7) ನೌಕರ ರಾಜ್ಯ ವಿಮಾ ಕಾಯಿದೆ – 1948

(8) ನೌಕರರ ಪ್ರಾವಿಡೆಂಡ್ ಫಂಡ್ ಮತ್ತು ಇತರ ಸೌಲಭ್ಯಗಳ ಕಾಯಿದೆ – 1979

(9) ಅಂತರರಾಜ್ಯ ವಲಸೆ ಕೆಲಸಗಾರರ (ಉದ್ಯೋಗ ನಿಯಂತ್ರಣ ಮತ್ತು ಸೇವಾ ಪರಿಸ್ಥಿತಿಗಳ ಕಾಯಿದೆ – 1979

(10) ಲೈಂಗಿಕ ದೌರ್ಜನ್ಯಗಳ ವಿರುದ್ಧ ಮಹಿಳಾ ರಕ್ಷಣಾ ಮಸೂದೆ – 2005

(11) ಕೆಲಸದ ಸ್ಥಳದಲ್ಲಿ ಲೈಂಗಿಕ ದೌರ್ಜನ್ಯ ನಡೆದಿರುವ ಬಗ್ಗೆ ವಿಶಾಖ ಪ್ರಕರಣದ ಮಾರ್ಗದರ್ಶನಗಳು.

## ಸ್ವಾಟ್ಯೂಟರಿ ಪ್ರಕಾರಗಳು

(1) ರಾಷ್ಟ್ರೀಯ ಮಹಿಳಾ ಆಯೋಗದ ಕಾಯಿದೆ – 1990

(2) ರಾಜ್ಯ ಮಹಿಳಾ ಆಯೋಗದ ಕಾಯಿದೆ – 1995

(3) ಮಕ್ಕಳ ಮತ್ತು ಹೆಣ್ಣು ಮಕ್ಕಳ ಸಂರಕ್ಷಣೆ ಕುರಿತಾದ ಕಾನೂನುಗಳು

(4) ವೈದ್ಯಕೀಯ ಗರ್ಭ ಸಮಾಪನ ಕಾಯಿದೆ – 1971

(5) ಗರ್ಭಧಾರಣಾ ಪೂರ್ವದ ಮತ್ತು ಜನನ ಪೂರ್ವಪರೀಕ್ಷಣಾ ತಂತ್ರಗಳ (ಲಿಂಗ ಆಯ್ಕೆ ನಿಷೇಧ) ಕಾಯಿದೆ – 1994

## ಕೌಟುಂಬಿಕ ಕಾನೂನುಗಳು

ಕೌಟುಂಬಿಕ ಕಾನೂನುಗಳು ಸಾಮಾನ್ಯವಾಗಿ ವಿವಾಹಕ್ಕೆ ಸಂಬಂಧಿಸಿದಂತೆ ವಿಚ್ಛೇದನ, ಜೀವನಾಂಶ, ಮಕ್ಕಳ ಅಭಿರಕ್ಷೆ ಪೋಷಕತ್ವ ಮತ್ತು ಪತಿ ಪತ್ನಿಯರ ಆಸ್ತಿಗಳಿಗೆ ಸಂಬಂಧಿಸಿದ ಕಾನೂನುಗಳ ವಿಚಾರಗಳಾಗಿವೆ.

ಭಾರತ ಜಾತ್ಯಾತೀತ ದೇಶ, ನಿರ್ದೇಶನಾ ತತ್ವಗಳಾಗಿ ಸಮಾನ ನಾಗರೀಕ ನೀಡಿ ಸಂಹಿತೆಯೊಂದನ್ನು (ಕಾನೂನು ಸಿವಿಲ್ ಕೋಡ್) ರೂಪಿಸುವಂತೆ ಭಾರತೀಯ ಸಂವಿಧಾನವು ಉದ್ದೇಶಿಸಿದರೂ, ಸಂಬಂಧಿಸಿದ ಕಕ್ಷಿದಾರ ಪಕ್ಷಗಳ ಸಾಮುದಾಯಿಕ/ಧಾರ್ಮಿಕ ಹಿನ್ನೆಲೆಗಳ ಆಧಾರದಲ್ಲಿ ವಿಭಿನ್ನ ವೈಯಕ್ತಿಕ ಕಾನೂನುಗಳು (ಪರ್ಸನಲ್ ಲಾ) ಕೌಟುಂಬಿಕ ವಲಯದಲ್ಲಿ ಅನ್ವಯಿಸುತ್ತಿರುವ ವ್ಯವಸ್ಥೆಯೊಂದನ್ನು ಭಾರತವು ಮುಂದುವರೆಸಿಕೊಂಡು ಹೋಗುತ್ತಿದೆ. ಇವುಗಳಿಗೆ ವಿಶೇಷ ವಿವಾಹ ಕಾಯಿದೆ ಹೊರತಾಗಿದೆ. ಈ ಕಾಯಿದೆಯು ಒಂದು ಜಾತ್ಯಾತೀತ ಕಾಯಿದೆಯಾಗಿದ್ದು, ಎಲ್ಲಾ ಜನರನ್ನು ಅವರ ಧರ್ಮ, ಕಟ್ಟುಪಾಡುಗಳು ಮತ್ತು ಸಮುದಾಯಗಳ ಭಿನ್ನತೆಗಳಿಲ್ಲದೇ (ಜಮ್ಮು ಮತ್ತು ಕಾಶ್ಮೀರ ರಾಜ್ಯಗಳನ್ನು ಹೊರತುಪಡಿಸಿ) ಅನ್ವಯಿಸುತ್ತದೆ. ಯಾವುದೇ ವಿವಾಹ ವಿಧಿಯು ಧಾರ್ಮಿಕ ಸಮಾರಂಭಗಳೊಂದಿಗೆ ನಡೆದಿದ್ದು, ತದನಂತರದಲ್ಲಿ ಉಭಯ ಪಕ್ಷದವರು ಈ ಕಾಯಿದೆಯಡಿಯಲ್ಲಿ ನೋಂದಣಿ ಮಾಡಿಕೊಳ್ಳಬಹುದು. ಆದುದರಿಂದ ಇಂತಹ ವಿವಾಹಗಳಿಂದ ಉದ್ಭವಿಸುವ ವಿವಾದಗಳನ್ನು ಸಮುದಾಯ ಅಥವಾ ಧರ್ಮದ ಹೊರತಾಗಿಯೂ ಈ ಕಾಯಿದೆಯನ್ವಯ ನಡೆದುಕೊಳ್ಳಬೇಕಾಗುತ್ತದೆ. ವಿಭಿನ್ನ ವರ್ಗಗಳಿಗೆ ಅನ್ವಯಿಸುವ ವಿವಿಧ ಕೌಟುಂಬಿಕ ಕಾನೂನುಗಳು ಮೇಲೆ ಹೇಳಿದ ವಿವಾಹ ಕಾಯ್ದೆಗಳಾಗಿರುತ್ತವೆ.

## ಕೌಟುಂಬಿಕ ನ್ಯಾಯಾಲಯದ ಕಾಯಿದೆ – 1984

ವಿವಾಹ ಮತ್ತು ಕೌಟುಂಬಿಕ ವ್ಯವಹಾರಗಳು ಹಾಗೂ ಇವುಗಳೊಂದಿಗೆ ಸಂಬಂಧಿಸಿರುವ ಇತರ ವಿಚಾರಗಳೊಂದಿಗಿನ ವಿವಾದಗಳನ್ನು ತ್ವರಿತವಾಗಿ ಇತ್ಯರ್ಥಗೊಳಿಸುವ ಮತ್ತು ಸಂಧಾನ ಏರ್ಪಡಿಸುವ ಉದ್ದೇಶದಿಂದ ಕೌಟುಂಬಿಕ ನ್ಯಾಯಾಲಯಗಳನ್ನು ಸ್ಥಾಪಿಸಲಾಗಿದೆ.

## ಕೌಟುಂಬಿಕ ದೌರ್ಜನ್ಯದಿಂದ ಮಹಿಳಾ ರಕ್ಷಣಾ ಅಧಿನಿಯಮ - 2005

ಈ ಕಾಯಿದೆಯನ್ನು 2005ರ ಸೆಪ್ಟೆಂಬರ್ 13ರಂದು ಶಾಸನವನ್ನು ತರಲಾಯಿತಾದರೂ 2006ನೇ ಅಕ್ಟೋಬರ್ 26ರಿಂದ ಇದು ಜಾರಿಗೆ ಬಂದಿದೆ. ಇದು ಕೇಂದ್ರ ಸರ್ಕಾರದ ಶಾಸನವಾಗಿದ್ದು, ಜಮ್ಮು ಮತ್ತು ಕಾಶ್ಮೀರ ರಾಜ್ಯವನ್ನು ಹೊರತುಪಡಿಸಿ ದೇಶದ ಎಲ್ಲ ಕಡೆಯಲ್ಲೂ ಅನ್ವಯಿಸುತ್ತದೆ.

**ಈ ಕಾಯಿದೆಯ ಉದ್ದೇಶ :**

(1) ವೈವಾಹಿಕ ದೌರ್ಜನ್ಯ/ಕೂಡಿ ಬಾಳುವ ಮನೆಯಲ್ಲಿ /ಖಾಸಗಿ ಜೀವನದಲ್ಲಿ ನಡೆಯುವ ದೌರ್ಜನ್ಯವನ್ನು ತಡೆಯುವುದು.

(2) ಕೌಟುಂಬಿಕ ದೌರ್ಜನ್ಯಕ್ಕೆ ಬಲಿಯಾದ ಮಹಿಳೆಯರ ರಕ್ಷಣೆ

(3) ಕೌಟುಂಬಿಕ ದೌರ್ಜನ್ಯದ ವಿರುದ್ಧ ಪರಿಹಾರಾತ್ಮಕ /ಸಾಂಸ್ಥಿಕ ಸೂತ್ರವೊಂದನ್ನು ರೂಪಿಸುವುದು.

ಈ ಕಾಯಿದೆಯು ದೌರ್ಜನ್ಯರ ಕುರಿತಾಗಿ ಸಮರ್ಪಕವಾದ ವ್ಯಾಖ್ಯಾನವನ್ನು ನೀಡುತ್ತದೆ. ಅವುಗಳಲ್ಲಿ ದೈಹಿಕ, ಮಾನಸಿಕ, ಮೌಖಿಕ, ಭಾವನಾತ್ಮಕ, ಆರ್ಥಿಕ, ಲೈಂಗಿಕ, ದೌರ್ಜನ್ಯ ಇತ್ಯಾದಿಗಳು ಸೇರಿವೆ. ದೌರ್ಜನ್ಯವನ್ನು ಎಸಗುವುದು ಮಾತ್ರವಲ್ಲದೇ ಹಾಗೆ ಮಾಡುವುದಾಗಿ ಆತಂಕ ಒಡ್ಡುವುದು ಅದರಲ್ಲಿ ಸೇರಿಕೊಂಡಿದೆ. ಈ ಕಾಯಿದೆಯು ಕೂಡಿಬಾಳುವ ಮನೆಯ ಬಗ್ಗೆ ಸ್ಪಷ್ಟವಾದ ವ್ಯಾಖ್ಯಾನವನ್ನು ನೀಡುತ್ತದೆ.

ಈ ಕಾಯಿದೆಯ ಪ್ರಯೋಜನವನ್ನು ಯಾರು ಪಡೆಯಬಹುದೆಂದರೆ – ಪತ್ನಿ ಮದುವೆಯಂತಹ ಸಂದರ್ಭದಲ್ಲಿ ಜೀವಿಸುವವರು, ವಿಧವೆಯರು, ತಾಯಿ, ಸಹೋದರ, ಮೈದುನ, ಮಕ್ಕಳು, ದತ್ತು ಮಕ್ಕಳು ಅಥವಾ ವಿವಾಹದ ಮೂಲಕ ಅಥವಾ ರಕ್ತ ಸಂಬಂಧ ಹೊಂದಿರುವವರು ದತ್ತು ಮಗು ಸೇರಿದಂತೆ ಇದರ ಉಪಯುಕ್ತತೆಯನ್ನು ಪಡೆಯಬಹುದು.

ಕೌಟುಂಬಿಕ ದೌರ್ಜನ್ಯಕ್ಕೊಳಗಾದ ಮಹಿಳೆಯೊಬ್ಬಳು ತನ್ನ ಗಂಡನ ಮನೆಯಿಂದ ಹೊರಬರಬೇಕಾಗಿಲ್ಲ. ಈ ಕಾಯಿದೆಯು ಆ ಮಹಿಳೆಯು ತನ್ನ ಗಂಡನ ಮನೆಯಲ್ಲಿ ವಾಸಿಸುವ ಹಕ್ಕುಗಳನ್ನು ಗುರುತಿಸುತ್ತದೆ. ಆಕೆಯು ತನ್ನನ್ನು ಗಂಡನ ಮನೆಯಿಂದ ಹೊರಹಾಕದಂತೆ ತಡೆಯಲು ನ್ಯಾಯಾಲಯದಿಂದ ತಡೆಯಾಜ್ಞೆ ಪಡೆದುಕೊಳ್ಳಬಹುದು. ಇಂತಹ ಹಿಂಸಾತ್ಮಕ ಕೃತ್ಯಗಳ ವಿರುದ್ಧ ಮತ್ತು ಗಂಡನ ಮನೆಯಲ್ಲಿ ವಾಸಿಸುವ ಬಗ್ಗೆ ತಡೆಯಾಜ್ಞೆ ಪಡೆಯುವಂತಹ ಪರಿಹಾರಗಳು ಸಾಮಾನ್ಯವಾದ ಎಲ್ಲ ಕಾನೂನುಗಳಲ್ಲಿಯೂ ಇವೆ. ಆದರೆ ಅವುಗಳನ್ನು ಒಂದು ಹಕ್ಕು ಒದಗಿಸಬಲ್ಲ ಎರಡನೆಯದು ಇಂತಹ ಪರಿಹಾರಗಳನ್ನು ಪಡೆದುಕೊಳ್ಳುವ ಬಗ್ಗೆ ಎಲ್ಲ ಮಹಿಳೆಯರಿಗೆ ತಿಳಿದಿರುವುದಿಲ್ಲ. ಇದೀಗ ಅದು ಶಾಸನವಾಗಿರುವುದರಿಂದ ಅದೊಂದು ಹಕ್ಕೆಂಬ ನೆಲೆಯಲ್ಲಿ ಪರಿಹಾರ ಪಡೆಯಬಹುದು. ಅದರಲ್ಲಿನ ದೌರ್ಜನ್ಯವೆಂದರೆ ಏನು ಮತ್ತು ಹಕ್ಕುಗಳ ವ್ಯಾಖ್ಯಾನವು ಯಾವುದೇ ವ್ಯತ್ಯಾಸದ ಅರ್ಥಕ್ಕೆ ಎಡೆಮಾಡಿಕೊಡುವುದಿಲ್ಲ.

ಈ ಕಾಯಿದೆಯು ಅನುಷ್ಠಾನ ಮಾಡುವ ನಾನಾ ವ್ಯಕ್ತಿಗಳ ಪಾತ್ರವನ್ನು ಕಾಯಿದೆಯು ಗುರುತಿಸಿದೆ.

ನ್ಯಾಯಾಧೀಶರು ಪ್ರಥಮ ದರ್ಜೆ ಜ್ಯುಡಿಷಿಯಲ್ ಮ್ಯಾಜಿಸ್ಟ್ರೇಟ್ ಅಥವಾ ಮೆಟ್ರೋಪಾಲಿಟನ್ ಮ್ಯಾಜಿಸ್ಟ್ರೇಟ್ ಕಾಯಿದೆಯ ಅಡಿಯಲ್ಲಿ ಆದೇಶ ನೀಡಲು ಅಧಿಕಾರ ಹೊಂದಿದ್ದಾರೆ.

ಸಂರಕ್ಷಣಾ ಅಧಿಕಾರಿಗಳು : ಆಯಾ ಜಿಲ್ಲೆಯ ಉಪನಿರ್ದೇಶಕರು, ತಾಲ್ಲೂಕು ಮಟ್ಟದ ಶಿಶು ಅಭಿವೃದ್ಧಿ ಅಧಿಕಾರಿಗಳ ಸಂರಕ್ಷಣಾ ಅಧಿಕಾರಿಗಳಾಗಿರುತ್ತಾರೆ. ಕೌಟುಂಬಿಕ ದೌರ್ಜನ್ಯಕ್ಕೆ ಬಲಿಯಾಗಿರುವ ಮಹಿಳೆಗೆ ಬೆಂಬಲ ನೀಡಿ ಮಾರ್ಗದರ್ಶನ ನೀಡುವುದು ಇವರ ಪಾತ್ರ. ಸಂರಕ್ಷಣಾಧಿಕಾರಿಗಳು ನ್ಯಾಯಾಧೀಶರಿಗೆ ಸಹಾಯಕರಾಗಿ ಕಾರ್ಯನಿರ್ವಹಿಸುತ್ತಾರೆ.

ಈ ಕಾಯಿದೆ ಅನುಷ್ಠಾನದಲ್ಲಿ ಸೇವೆ ಒದಗಿಸುವವರಾಗಿ ಸರಕಾರೇತರ ಸಂಸ್ಥೆಗಳ ಭಾಗವಹಿಸುವಿಕೆಗೆ ಅವಕಾಶ ಕಲ್ಪಿಸುತ್ತದೆ. ಮಾನ್ಯತೆ ಹೊಂದಿರುವ ಸರಕಾರೇತರ ಸಂಸ್ಥೆಗಳನ್ನು ಈ ಕಾಯಿದೆಯಡಿ ನೋಂದಾಯಿಸಬೇಕಾಗುತ್ತದೆ. ಸಂರಕ್ಷಣಾ ಅಧಿಕಾರಿ ಮತ್ತು ಇತರ ಕಾನೂನು ಸಂಬಂಧಿ ಹಾಗೂ ವೈದ್ಯಕೀಯ ವೃತ್ತಿಯವರ ಸಹಾಯದೊಂದಿಗೆ ಸರಕಾರೇತರ ಸಂಸ್ಥೆಗಳ ದುಃಖಿತ ಮಹಿಳೆಗೆ ಸಹಾಯ ನೀಡುತ್ತವೆ. ಈ ರೀತಿ ಕೌಟುಂಬಿಕ ದೌರ್ಜನ್ಯ ನಿಯಂತ್ರಿಸುವಲ್ಲಿ ಸಂಬಂಧಿತ ಇಲಾಖೆಗಳಾದ ಕಾನೂನು, ಗೃಹ ಇಲಾಖೆ, ಶಾಂತಿ ಮತ್ತು ಸುವ್ಯವಸ್ಥೆ, ಆರೋಗ್ಯ, ಮಾನವ ಸಂಪನ್ಮೂಲ, ಸಚಿವಾಲಯ ಮೊದಲಾದವುಗಳ ಸೇವೆಯನ್ನು ಪರಿಣಾಮಕಾರಿ ರೀತಿಯಲ್ಲಿ ಸಂಯೋಜಿಸುವುದನ್ನು ಈ ಕಾಯಿದೆ ಉದ್ದೇಶಿಸಿದೆ. ಅಲ್ಲದೇ ಇವುಗಳ ಕಾರ್ಯನಿರ್ವಹಣೆಯ ಬಗ್ಗೆ ಆಗಾಗ ಪರಾಮರ್ಶೆ ನಡೆಸಬೇಕೆಂದು ಹೇಳಲಾಗಿದೆ.

ಈ ಕಾಯಿದೆಯಲ್ಲಿ ಮಹಿಳಾಪರ ಕಳಕಳಿ ಹಾಗೂ ಅವಳ ಮೇಲಿನ ದೌರ್ಜನ್ಯಕ್ಕೆ ತಡೆ ಒಡ್ಡುವ ಆಶಾಕಿರಣ ಮಾಡಿದೆ. ಆದರೆ ಇವುಗಳನ್ನು ಬಳಸಿಕೊಳ್ಳುವುದು ಮಹಿಳೆಗೆ ಬಿಟ್ಟ ವಿಚಾರ. ಕೆಲವೊಮ್ಮೆ ಮಹಿಳೆಯರು ಸಹ ಈ ಕಾಯ್ದೆಯನ್ನು ದುರುಪಯೋಗ ಪಡಿಸಿಕೊಳ್ಳಬಹುದಾಗಿದೆ. ಹಲವಾರು ಸಲ ಯಾವುದೇ ರೀತಿಯ ಕಿರುಕುಳ ನಡೆಯದೇ ಇದ್ದರೂ ಕೆಲವು ದೂರ್ತ ಮಹಿಳೆಯರು ಕಾನೂನಿನ ಪ್ರಯೋಜನ ಪಡೆದು ತಮ್ಮ ಸ್ವಾರ್ಥ ಸಾಧನೆಗಾಗಿ ನ್ಯಾಯಾಲಯಕ್ಕೆ ದೂರು ಸಲ್ಲಿಸಬಹುದಾಗಿದೆ. ಮೇಲ್ನೋಟಕ್ಕೆ ಇಂತಹ ದೂರುಗಳನ್ನು ನ್ಯಾಯಾಲಯ ಪರಿಶೀಲಿಸದೇಬೇಕಾಗಿದ್ದರೂ ಸಹ ಆಪಾದನೆ ಮತ್ತು ಆಪಾದಿತರನ್ನು ದೃಢೀಕರಿಸುವಲ್ಲಿ ವಿಫಲವಾಗಬಹುದುದಾಗಿದೆ. ಯಾಕೆಂದರೆ ಇತ್ತೀಚಿನ ದಿನಗಳಲ್ಲಿ ಈ ತರಹದ ದೂರುಗಳಿಂದ ಪುರುಷರ ಮೇಲೆ ಮಹಿಳೆಯದೇ ದಬ್ಬಾಳಿಕೆಗಳು ನಡೆಯುತ್ತಿರುವುದನ್ನು ಕಾಣಬಹುದು. ಹಾಗಾಗಿ ಪುರುಷರು ಸಹ ತಮ್ಮ ಅಹವಾಲು, ದೂರುಗಳನ್ನು ದಾಖಲಿಸುವ ಹಾಗೂ ನಮಗೂ ರಕ್ಷಣೆ ಕೊಡುವ ಕಾನೂನನ್ನು ರಚಿಸಬೇಕೆನ್ನುವ ಕೂಗು ಕೇಳಿ ಬರುತ್ತಿದೆ. ಹಾಗಾಗಿ ಮಹಿಳೆ ತನ್ನ ಹಕ್ಕುಗಳನ್ನು ತಾನೇ ಅರಿತು, ಯಾವ ರೀತಿ ಪಡೆಯಬೇಕೆಂದು ತಿಳಿದು ಹೊಂದಬೇಕು. ತನ್ನನ್ನು ತಾನೇ ಅರಿತು ನಂತರ ನ್ಯಾಯವಾದ ಹಕ್ಕುಗಳನ್ನು ಪಡೆದುಕೊಂಡ ಆ ಮೂಲಕ ಆಕೆ ಸಬಲೀಕರಣ ಹೊಂದಲು ಸಾಧ್ಯ. ಏನೆಲ್ಲಾ ಕಾಯಿದೆಗಳು, ನಿಯಮಗಳು ಬಂದರೂ ಸಹ ಮಹಿಳೆ ಹಲವು ಸಾಮಾಜಿಕ ಸಮಸ್ಯೆಗಳಿಂದ ತನ್ನ ಮೂಲಭೂತ ಹಕ್ಕುಗಳನ್ನು ಹೊಂದಲು ಸಾಧ್ಯವಾಗುತ್ತಿಲ್ಲ. ಅಂದರೆ ನ್ಯಾಯಯುತವಾಗಿ ಹಾಗೂ ಸರಿಸಮಾನತೆ ಇಲ್ಲದಿರುವುದು. ಪ್ರಪಂಚದ ಮೂರರಲ್ಲಿ

ಎರಡು ಭಾಗದಷ್ಟು ಕೆಲಸವನ್ನು ಮಹಿಳೆ ಮಾಡುತ್ತಾಳೆ. ಹಾಗೆಯೇ ಹತ್ತರಲ್ಲಿ ಒಂದು ಭಾಗದಷ್ಟನ್ನು ಮಾತ್ರ ಮಹಿಳೆ ಸಂಪಾದಿಸುತ್ತಾಳೆ. ಪ್ರಪಂಚದಲ್ಲಿ ಶೇಕಡ ಒಂದಕ್ಕಿಂತ ಕಡಿಮೆ ಆಸ್ತಿಯನ್ನು ಮಹಿಳೆಯು ಹೊಂದಿರುತ್ತಾಳೆ. ಅಲ್ಲದೆ ಅತಿಮುಖ್ಯವಾದುದೆಂದರೆ ಮೂರರಲ್ಲಿ ಎರಡು ಭಾಗ ಮಹಿಳೆಯರು ಶಿಕ್ಷಣದಿಂದ ವಂಚಿತರಾಗುತ್ತಿದ್ದಾರೆ.

ನಮ್ಮ ದೇಶದಲ್ಲಿ ಕಾಯ್ದೆಗಳು ರಚಿಸುವುದರ ಜೊತೆಗೆ ಮಹಿಳೆಯರಲ್ಲಿ ಅನಕ್ಷರತೆಯನ್ನು ಹೋಗಲಾಡಿಸುವಲ್ಲಿ ಪ್ರಮುಖ ಪಾತ್ರ ವಹಿಸಬೇಕು. ಹಾಗೆಯೇ ಆರ್ಥಿಕ ಸ್ವಾವಲಂಬನೆಯನ್ನು ಹೊಂದಬೇಕು. ಹಾಗಾದರೆ ಮಾತ್ರ ಸಮಾಜದಲ್ಲಿ ಪುರುಷರು ಆಕೆಯನ್ನು ಗೌರವ ಭಾವದಿಂದಲಾದರೂ ಕಾಣಬಹುದು.

**ಶಿಕ್ಷಣದಲ್ಲಿ ಮಹಿಳಾ ಹಕ್ಕು :**

ಭಾರತದಲ್ಲಿ ಸಾಂಪ್ರದಾಯಿಕವಾಗಿ ಮಹಿಳೆಯರನ್ನು ಪೂಜ್ಯನೀಯ ಭಾವನೆಯಿಂದ ಗೌರವಿಸುವ ಪದ್ಧತಿಯಿದೆ. ಆದರೆ ಮಹಿಳೆಯರ ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ಸ್ಥಾನಮಾನ ಪುರುಷರಿಗಿಂತ ಕೆಳಮಟ್ಟದಲ್ಲಿದೆ. ಇದಕ್ಕೆ ಕಾರಣ ಮಹಿಳೆಯರಿಗೆ ಸಿಗದಿರುವ ಶಿಕ್ಷಣ. ಪ್ರತಿಯೊಬ್ಬ ವ್ಯಕ್ತಿಯ ಬದಲಾವಣೆಯ ಪ್ರಮುಖ ಅಸ್ತ್ರ ಶಿಕ್ಷಣ. ಶಿಕ್ಷಣ ಎಂಬುವುದು ಕಲಿಕೆಯ ಮೂಲಕ ಜ್ಞಾನವನ್ನು ವೃದ್ಧಿಸುವ ಮಾರ್ಗ. ಭಾರತದ ಎಲ್ಲಾ ಪ್ರಜೆಗಳಿಗೆ ಶಿಕ್ಷಣ ನೀಡುವುದು ಸಂವಿಧಾನಾತ್ಮಕ ಬದ್ಧತೆಯಾಗಿದೆ. 1951ರಲ್ಲಿ ಸಾಕ್ಷರತಾ ಪ್ರಮಾಣವು ಪುರುಷರಿಗೆ 25 ಶೇಕಡ ಮತ್ತು ಮಹಿಳೆಯರಿಗೆ 9 ಶೇಕಡ ಆಗಿತ್ತು. ಆದರೂ 1961ರ ವೇಳೆಗೆ ಸಾರ್ವತ್ರಿಕ ಅನಕ್ಷರಸ್ಥತೆಯನ್ನು ಹೋಗಲಾಡಿಸಬೇಕೆಂಬುದು ಸಂವಿಧಾನದ ಆಶಯವಾಗಿತ್ತು. ಆದರೆ ಇದು ಫಲಿಸಲಿಲ್ಲ. ನಂತರ 2000ನೇ ಇಸವಿಗೆ ಇದು ಸಾಧ್ಯವಾಯಿತು. ಸ್ವಾತಂತ್ರ್ಯಾನಂತರ ಸರಕಾರದ ಶಿಕ್ಷಣ ನೀತಿ ಹಲವಾರು ಬದಲಾವಣೆಗಳನ್ನು ಕಂಡಿತು. ಬ್ರಿಟಿಷರು ಶಿಕ್ಷಣ ನೀತಿಯು ಇದಕ್ಕೆ ಪ್ರೇರಣೆಯಾಯಿತು. ಪ್ರಾರಂಭದಲ್ಲಿ ಸಂವಿಧಾನವು ಪ್ರಾಥಮಿಕ ಶಿಕ್ಷಣದ ಜವಾಬ್ದಾರಿಯನ್ನು ರಾಜ್ಯ ಸರಕಾರಗಳಿಗೆ ಮತ್ತು ತಾಂತ್ರಿಕ ಹಾಗೂ ಉನ್ನತ ಶಿಕ್ಷಣದ ಜವಾಬ್ದಾರಿಯನ್ನು ಕೇಂದ್ರ ಸರಕಾರಕ್ಕೆ ವಹಿಸಿತು. ಆದರೆ 1976ರಲ್ಲಿ ಸಂವಿಧಾನದ 42ನೇ ತಿದ್ದುಪಡಿಯನ್ನು ಅಂಗೀಕರಿಸುವುದರ ಮೂಲಕ ಶಿಕ್ಷಣ ನೀಡಿಕೆಯನ್ನು ಕೇಂದ್ರ ಮತ್ತು ರಾಜ್ಯ ಸರಕಾರಗಳು ಜಂಟಿಯಾಗಿ ಜವಾಬ್ದಾರಿಯಿಂದ ಕಾರ್ಯನಿರ್ವಹಿಸುವ ಹಾಗಾಯಿತು.

"ಮನೆಯೇ ಮೊದಲ ಪಾಠಶಾಲೆ: ತಾಯಿಯೇ ಮೊದಲ ಗುರು" ಜಗತಿನ ಜನಸಂಖ್ಯೆಯಲ್ಲಿ ಅರ್ಧದಷ್ಟು ಮಹಿಳೆಯ ಸಂಖ್ಯೆ ಇದೆ. ಆದರೆ ಈ ಗುರುವಾದ ಮಹಿಳೆಗೆ ಉತ್ತಮ ಶಿಕ್ಷಣ ಸಿಗುವಲ್ಲಿ ಅನೇಕ ಅಡೆತಡೆ, ಲಿಂಗ ಅಸಮಾನತೆಗಳ ಮಾರಕವಾಗಿವೆ. ಈ ರೀತಿಯ ಅಸಮಾನತೆಯನ್ನು ಹೋಗಲಾಡಿಸುವುದಕ್ಕೋಸ್ಕರವೇ ಇಂದು ಮಹಿಳೆಯರಿಗೆ ಉನ್ನತ ಶಿಕ್ಷಣ ನೀಡುವುದು ಅತಿ ಅಗತ್ಯವಾಗಿದೆ. ಪ್ರಸ್ತುತ ಸರಕಾರವು ಪ್ರಾಥಮಿಕ ಶಿಕ್ಷಣದ ಸಂಪೂರ್ಣ ಸಾರ್ವತ್ರೀಕರಣಕ್ಕೆ ಪೂರ್ಣವಾಗಿ ಬದ್ಧವಾಗಿದೆ. 1951ರಿಂದಲೂ ವಿದ್ಯಾಭ್ಯಾಸದ ವಿವಿಧ ಹಂತಗಳಲ್ಲಿ ಹೆಣ್ಣು ಮಕ್ಕಳು ಪಾಲ್ಗೊಳ್ಳುವಿಕೆ ಹೆಚ್ಚುತ್ತಲೇ ಇರುವುದನ್ನು ಕಾಣಬಹುದು. ಭಾರತ ಸಂಸತ್ತು 2002ರ ಡಿಸೆಂಬರ್‌ನಲ್ಲಿ ಸಂವಿಧಾನದ

86ನೇ ತಿದ್ದುಪಡಿಯನ್ನು ಅಂಗೀಕರಿಸುವುದರ ಮೂಲಕ 6 ರಿಂದ 14 ವರ್ಷದೊಳಗಿನ ಎಲ್ಲಾ ಮಕ್ಕಳಿಗೆ ಉಚಿತ ಮತ್ತು ಕಡ್ಡಾಯ ಶಿಕ್ಷಣ ನೀಡಿಕೆಯನ್ನು ಒಂದು ಮೂಲಭೂತ ಹಕ್ಕಾಗಿ ಮಾಡಿತು. ಅದರ ಪರಿಣಾಮವಾಗಿ ಸರ್ಕಾರವು 11 ಲಕ್ಷ ಜನವಸತಿ ಪ್ರದೇಶಗಳಲ್ಲಿರುವ 192 ಮಿಲಿಯನ್ ಮಕ್ಕಳ ಅವಶ್ಯಕತೆಗಳನ್ನು ಗಮನದಲ್ಲಿರಿಸಿಕೊಂಡು ಸರ್ವಶಿಕ್ಷಣ ಅಭಿಯಾನವೆಂಬ ಕಾರ್ಯಕ್ರಮವನ್ನು ಹಮ್ಮಿಕೊಂಡಿದೆ. ಈ ಯೋಜನೆಯಡಿ ಹೆಣ್ಣು ಮಕ್ಕಳ ಶಾಲಾ ಹಾಜರಾತಿ ಹೆಚ್ಚಿಸಲು, ಉಚಿತ ಪಠ್ಯಪುಸ್ತಕ, ಶೌಚಾಲಯ ಮತ್ತು ನವೀನ ಸಲಕರಣೆಗಳಿಗಾಗಿ ಪ್ರತಿ ಜಿಲ್ಲೆಗೆ 50 ಲಕ್ಷ ಮತ್ತು ಪ್ರತಿ ಯೋಜನೆಗೆ 15 ಲಕ್ಷ ಮಂಜೂರು ಮಾಡಲಾಗುತ್ತಿದೆ.

ಯಾವುದೇ ಒಂದು ವರ್ಗದಲ್ಲಿ ಇಂದು ಮಹಿಳೆ ತನ್ನದೇ ಆದ ಪ್ರಮುಖ ಪಾತ್ರವನ್ನು ನಿರ್ವಹಿಸುತ್ತಿದ್ದಾಳೆ. ಆಕೆ ತಾನು ನಿರ್ವಹಿಸುವ ಪಾತ್ರದಿಂದ ಲಾಭ ಪಡೆಯಬೇಕಾದರೆ ಆಕೆಗೆ ಶಿಕ್ಷಣವು ಅಗತ್ಯವಾದ ಅಂಶವಾಗಿದೆ. ಈ ರೀತಿಯ ಶಿಕ್ಷಣವು ಆಕೆಯಲ್ಲಿ ಸಾಕ್ಷರತಾ ಸಾಮರ್ಥ್ಯವನ್ನು ಹೆಚ್ಚಿಸುವಲ್ಲಿ ಕುಟುಂಬ ಆರ್ಥಿಕತೆಯ ಸುಧಾರಣೆಯಲ್ಲಿ, ಬಿಡುವಿನ ಸಮಯದಲ್ಲಿ ಆರ್ಥಿಕಾಭಿವೃದ್ಧಿಯ ಬಗ್ಗೆ, ಶೋಷಣೆಯ ವಿರುದ್ಧ ಹೋರಾಡುವ ಹಾಗೂ ತಾನು ಅನುಭವಿಸುತ್ತಿರುವ ತಾರತಮ್ಯಗಳ ನಿವಾರಣೆಗೆ ಶಿಕ್ಷಣವು ಸಹಾಯ ಮಾಡುತ್ತದೆ. ಇಂದಿನ ಯುಗದಲ್ಲಿ ಮಹಿಳೆಯು ತಾನು ಸಂಪೂರ್ಣವಾಗಿ ತನ್ನ ಹಕ್ಕು ಮತ್ತು ಬಾಧ್ಯತೆಗಳ ಅರಿವನ್ನು ಹೊಂದಿರುವ ತಿಳುವಳಿಕೆ ಮೂಲಕ ಶಿಕ್ಷಣದ ಹೊಸ ಯುಗದ ಹೊಸ್ತಿಲಲ್ಲಿ ನಿಂತಿದ್ದಾಳೆ. ನಮ್ಮ ಸಂವಿಧಾನದ ಪ್ರಕಾರ ಮಹಿಳೆಯು ಕೂಡ ಪುರುಷರಂತೆ ಸಮಾನವಾದ ಹಕ್ಕುಗಳನ್ನು ಹೊಂದಿದ್ದಾಳೆ. ಸಂವಿಧಾನವು ಅವಳಿಗೆ ಶಿಕ್ಷಣ ಮತ್ತು ಉದ್ಯೋಗದಲ್ಲಿ ಸಮಾನವಾದ ಅವಕಾಶವನ್ನು ಕಲ್ಪಿಸಿದೆ.

ಮಹಿಳೆಯರಲ್ಲಿ ಸ್ವನಂಬಿಕೆಯನ್ನು ಪೋಷಿಸುವ ಮತ್ತು ಮಹಿಳಾ ಹಕ್ಕುಗಳ ಬಗೆಗೆ ಪ್ರಜ್ಞೆ ಮೂಡಿಸುವ ಕಾರ್ಯವಾಗಬೇಕೆಂದು ಪ್ರಥಮ ಪಂಚವಾರ್ಷಿಕ ಯೋಜನೆಯಿಂದಲೂ ಅವಳಿಗೆ ಶಿಕ್ಷಣದ ಅವಶ್ಯಕತೆಯನ್ನು ಮನಗಂಡು ಕಾರ್ಯಯೋಜನೆಯನ್ನು ರೂಪಿಸಿಕೊಂಡು ಬರುತ್ತಿದೆ. ಈ ದಿಸೆಯಲ್ಲಿ ಪ್ರಥಮ ಪಂಚವಾರ್ಷಿಕ ಯೋಜನೆಯಲ್ಲಿ (1951–56) ಅಭಿವೃದ್ಧಿ ನೀತಿಯಲ್ಲಿ ಮಹಿಳೆಗೆ ಪಾಲಿನ ಉಲ್ಲೇಖವಿಲ್ಲ. ಆದರೆ ಕುಟುಂಬದಲ್ಲಿ ಮತ್ತು ಸಮುದಾಯದಲ್ಲಿ ಮಹಿಳೆ ಹೊಂದಿದ ಸ್ಥಾನಮಾನ, ಕರ್ತವ್ಯಗಳು ಮತ್ತು ಜವಾಬ್ದಾರಿಗಳನ್ನು ಆಧರಿಸಿ, ಸೃಜನಶೀಲ ಅಭಿವ್ಯಕ್ತಿ ಅವಕಾಶಗಳನ್ನು ಮಹಿಳೆಗೆ ಸಾಮಾಜಿಕ ಪರಿಸ್ಥಿತಿಗಳು ಕಲ್ಪಿಸಬೇಕು. ಈ ಮೂಲಕ ಸಾಮಾಜಿಕ ಶಾಸನಗಳಡಿಯಲ್ಲಿ ಸ್ವ–ಅಭಿವ್ಯಕ್ತಿ ಹಕ್ಕನ್ನು ಮಹಿಳೆಯರು ಸಾಧಿಸಬಹುದೆಂದೂ ಯೋಜನಾಕಾರರು ಭಾವಿಸಿದರು. ಇದು ಮಹಿಳೆಯರ ಆರೋಗ್ಯ ಶಿಕ್ಷಣ ಮತ್ತು ವೃತ್ತಿಪರ ತರಬೇತಿ ಸಮಸ್ಯೆಗಳನ್ನು ಪರಿಹರಿಸುವ ಮೂಲಕ ಮಹಿಳೆಯರ ಸಾಮಾಜಿಕ ಮತ್ತು ಆರ್ಥಿಕಾಭಿವೃದ್ಧಿಗೂ ನೆರವಾಗುತ್ತದೆಂದು ಯೋಜನಾಕಾರರು ನಂಬಿದರು.

ಎರಡನೇ ಪಂಚವಾರ್ಷಿಕ ಯೋಜನೆಯಲ್ಲಿಯೂ (1956–61) ಶಿಕ್ಷಣ ಕ್ಷೇತ್ರದಲ್ಲಿ ತಂದೆ ತಾಯಿಗಳಿಗೆ ಶಿಕ್ಷಣ ನೀಡುವ ಮೂಲಕ ಹೆಣ್ಣು ಮಗುವಿನ ಶಿಕ್ಷಣವನ್ನು ಉತ್ತೇಜಿಸುವ ಅಗತ್ಯ, ಹುಡುಗಿಯರ ಅಗತ್ಯಕನುಗುಣವಾಗಿ ಹುಡುಗಿಯರ ಶಿಕ್ಷಣ ನಿರೂಪಿಸುವುದು, ಮಹಿಳಾ ಶಿಕ್ಷಕರ ನೇಮಕಾತಿ ಅಗತ್ಯ ಕುರಿತು ಪ್ರಸ್ತಾಪಿಸಲಾಯಿತು.

ಮೂರನೇ ಪಂಚವಾರ್ಷಿಕ ಯೋಜನೆಯಲ್ಲಿ (1961–66) ಹಲವು ಮಹಿಳಾ ಕಲ್ಯಾಣದ ಬಗೆಗಿನ ಅಂಶಗಳನ್ನು ಕಾಣಬಹುದು. ಅದರಲ್ಲಿಯೂ ಶಿಕ್ಷಣದಲ್ಲಿರುವ ಲಿಂಗ ಅಂತರಗಳನ್ನು ಕಡಿಮೆಗೊಳಿಸುವುದು, ಹೆಣ್ಣು ಮಕ್ಕಳ ಪ್ರಾಥಮಿಕ ಶಿಕ್ಷಣದ ವಿಸ್ತರಣೆಗಾಗಿ ಮಹಿಳಾ ಶಿಕ್ಷಕಿಯರನ್ನು ತರಬೇತುಗೊಳಿಸಿ ನೇಮಿಸುವುದು ಹಾಗೂ ಅವರಿಗೆ ವಸತಿ ಕಲ್ಪಿಸುವುದರ ಬಗ್ಗೆ ತಿಳಿಸಿತು. ಜೊತೆಗೆ ಈ ಯೋಜನೆಯಲ್ಲಿ ಮಹಿಳಾ ಕಾಲೇಜುಗಳಿಗೆ ವಿಶೇಷ ಅನುದಾನ ಮತ್ತು ವಿ.ವಿ. ಮಟ್ಟದಲ್ಲಿ ಮಹಿಳೆಯರಿಗಾಗಿ ವಿಶೇಷ ಶಿಷ್ಯವೇತನ ನೀಡುವ ಅಗತ್ಯವನ್ನು ಒತ್ತಿ ಹೇಳಿತು.

ನಾಲ್ಕು ಮತ್ತು ಐದನೇ ಪಂಚವಾರ್ಷಿಕ ಯೋಜನೆಯಲ್ಲಿ ಹಿಂದಿನ ಯೋಜನೆಗಳ ಕಾರ್ಯಕ್ರಮವೇ ಮಹಿಳೆಯರ ವಿಷಯದಲ್ಲಿ ಮುಂದುವರೆಸಿದರು. ಮಹಿಳಾ ಅಭಿವೃದ್ಧಿ ಕುರಿತಂತೆ ಆರನೇ ಪಂಚವಾರ್ಷಿಕ ಯೋಜನೆಯು (1980–85) ಕ್ರಾಂತಿಕಾರಕ ಬದಲಾವಣೆ ತಂದಿತು. ಮೊತ್ತ ಮೊದಲ ಬಾರಿಗೆ ಯೋಜನೆ ಕರಡಿಗೆ ಮಹಿಳೆ ಮತ್ತು ಅಭಿವೃದ್ಧಿ ವಿಷಯದ ಅಧ್ಯಾಯವೊಂದು ಸೇರ್ಪಡೆಯಾಯಿತು. ಸಾರ್ವತ್ರಿಕ ನೆಲೆಯಲ್ಲಿ ಮಹಿಳೆಯ ಸ್ಥಿತಿ–ಗತಿ ವಿವೇಚನೆ, ಶಾಸನಾತ್ಮಕ ಮತ್ತು ಸಂವಿಧಾನಾತ್ಮಕ ಖಾತ್ರಿಗಳ ಹೊರತಾಗಿಯೂ, ಎಲ್ಲಾ ಕ್ಷೇತ್ರಗಳಲ್ಲೂ ಮಹಿಳೆಯರು ಪುರುಷರಿಗಿಂತ ಹಿಂದೆ ಇದ್ದಾರೆಂದು ಗುರುತಿಸಿತ್ತು. ಈ ಯೋಜನೆಯ ರಚನೆಯೆಂದರೆ ಶಿಕ್ಷಣ–ಉದ್ಯೋಗ ಮತ್ತು ಆರೋಗ್ಯ ಎಂಬ ಮೂರು ಅಂಶಗಳ ಅವಶ್ಯಕತೆಗಳನ್ನು ಪ್ರತಿಪಾದಿಸಿತು. ಮೊದಲ ಬಾರಿಗೆ ಮಹಿಳಾ ಆರ್ಥಿಕ ಸ್ವಾತಂತ್ರ್ಯವು ದೊರೆಯಬೇಕೆಂದು ತಿಳಿಸಿತು. ಅಲ್ಲದೆ ಮಹಿಳೆಯ ಹಕ್ಕುಗಳ ಸಂರಕ್ಷಣೆಗಾಗಿ ಜಾರಿಗೊಳಿಸಲಾದ ಸಾಮಾಜಿಕ ಕಾನೂನುಗಳ ಆಡಳಿತ ಯಂತ್ರದ ಸಮರ್ಪಕತೆಯನ್ನು ಪರಾವರ್ಶಿಸಲು ಸರ್ಕಾರ ಸಮಿತಿ ನೇಮಿಸಬೇಕೆಂದು ಹೇಳಿತು.

7ನೇ ಪಂಚವಾರ್ಷಿಕ ಯೋಜನೆಯು (1985–90)ಲ್ಲಿಯೂ ಮಹಿಳೆಗೆ ಲಾಭ ತರುವ ಪ್ರಾಥಮಿಕ ಆರೋಗ್ಯ ಸೇವೆಗಳತ್ತ ಗಮನ ನೀಡಿತು. ಪ್ರಾಥಮಿಕ ಶಿಕ್ಷಣದಲ್ಲಿ ಹುಡುಗಿಯರ ದಾಖಲಾತಿಗೆ ಸಂಬಂಧಿಸಿದ ಅಂತರಗಳನ್ನು ಮತ್ತು ಕೊರತೆಗಳನ್ನು ಗಮನಿಸಿತು. ಸೂಕ್ತ ವೃತ್ತಿ ತರಬೇತಿ ಮತ್ತು ಮಹಿಳಾ ಶಿಕ್ಷಣದನ್ವಯ ಮಹಿಳೆಯರಿಗಾಗಿ ಹೆಚ್ಚು ವೃತ್ತಿ ಕೌಶಲ್ಯಗಳ ಮತ್ತು ದೈಹಿಕ ಶ್ರಮದ ಉದ್ಯೋಗಾವಕಾಶಗಳನ್ನು ಸೃಷ್ಟಿಸಬೇಕೆಂದು ಪ್ರತಿಪಾದಿಸಿತು. ತಂತ್ರಜ್ಞಾನ ಪ್ರತ್ಯಕ್ಷತೆ ಕೇಂದ್ರಗಳನ್ನು ತೆರೆದು ಮಹಿಳೆಯರು ಅವುಗಳಲ್ಲಿ ಪಾಲುಗೊಳ್ಳಬೇಕೆಂದು ಪ್ರತಿಪಾದಿಸಿತು. ಮಹಿಳೆಯರ ಸ್ವನಂಬಿಕೆ ಪೋಷಿಸುವ ಮತ್ತು ಮಹಿಳಾ ಹಕ್ಕುಗಳ ಬಗೆಗೆ ಪ್ರಜ್ಞೆ ಮೂಡಿಸುವ ಕಾರ್ಯವನ್ನು ಉಂಟುಮಾಡಲು ತಿಳಿಸಿತು. ಆಗ ಅಭಿವೃದ್ಧಿ ಕುರಿತು ಮಹಿಳೆಯರು ತಮ್ಮ ಸುಪ್ತ ಸಾಮರ್ಥ್ಯವನ್ನು ತಿಳಿಯುವುದು ಸಾಧ್ಯ. ತನ್ಮೂಲಕ ಅಭಿವೃದ್ಧಿ ಕ್ರಿಯೆಯಲ್ಲಿ ತಮ್ಮ ಹಕ್ಕುಗಳನ್ನು ಪಾದಿಸಲು ಮಹಿಳೆಯರಿಗೆ ಸಾಧ್ಯವಾಗುತ್ತದೆ ಎಂದು ಪ್ರತಿಪಾದಿಸಿತು. ಅಲ್ಲದೆ ಆರೋಗ್ಯ, ಶಿಕ್ಷಣ, ಪೌಷ್ಠಿಕಾಹಾರ, ವಿಜ್ಞಾನ ಮತ್ತು ತಂತ್ರಜ್ಞಾನದ ಬಳಕೆ ಮತ್ತು ಉದ್ಯೋಗ ಸ್ಪಷ್ಟ ಕುರಿತು ಮಹಿಳೆಯರಿಗೆ ವಿಶೇಷ ಆದ್ಯತೆ ನೀಡಲು ಅಭಿಪ್ರಯಿಸಿತು. ಅದೇ ರೀತಿ ಮಹಿಳೆಗೆ ಸಂಬಂಧಿಸಿದ ಶಿಕ್ಷಣ ಮತ್ತು ಆರೋಗ್ಯ ಕಾರ್ಯಕ್ರಮಗಳನ್ನು ಮುಂದುವರಿಸಲಾಯಿತು.

ಪ್ರಾಥಮಿಕ ಶಿಕ್ಷಣದ ಸಾರ್ವತ್ರೀಕರಣದ ಜೊತೆಗೆ, ಶಾಲೆಯಲ್ಲಿ ಹೆಣ್ಣು ಮಗುವನ್ನು ಉಳಿಸಿಕೊಳ್ಳಲು ಹೆಣ್ಣು ಮಕ್ಕಳ ಶಾಲೆ ಬಿಡುವುದನ್ನು ಕಡಿಮೆಗೊಳಿಸಲು, ವಯಸ್ಕ ಮಹಿಳೆಯರ ಸಾಕ್ಷರತೆ ಹೆಚ್ಚಿಸಲು ವಿಶೇಷ ಪ್ರಯತ್ನಗಳನ್ನು ಈ ಯೋಜನೆಯಲ್ಲಿ ಮಾಡಲಾಯಿತು. ಅದರಂತೆ 6–11 ವರ್ಷಗಳ ವಯೋಮಾನದ ಹೆಣ್ಣು ಮಕ್ಕಳ ಶಾಲಾ ದಾಖಲಾತಿಯ ಅನುಪಾತವು 1950–51ರಲ್ಲಿ ಶೇಕಡ 24.6 ಇದ್ದದ್ದು 1989–90ರ ವೇಳೆಗೆ ಶೇಕಡ 83.60ಕ್ಕೆ ಹೆಚ್ಚಳವಾಯಿತು. 11–14 ವರ್ಷಗಳ ವಯೋಮಾನದ ಹೆಣ್ಣು ಮಕ್ಕಳ ದಾಖಲಾತಿ ಅನುಪಾತವು 1950–51 ಶೇಕಡ 4.5 ಇದ್ದು ಅದು 1989–90ರ ವೇಳೆಗೆ 44.58ಕ್ಕೆ ಹೆಚ್ಚಳವಾಯಿತು. ಹಾಗೆಯೇ ಮಾಧ್ಯಮಿಕ ಶಾಲೆಗಳಲ್ಲಿ 1989–90ರಲ್ಲಿ 19.61 ಲಕ್ಷ ಹೆಣ್ಣು ಮಕ್ಕಳಿದ್ದು ಅದು ಬಿಟ್ಟ ಶಾಲಾ ದಾಖಲಾತಿಯ ಶೇಕಡ 31.72ರಷ್ಟಿತ್ತು. 1950–51ರಲ್ಲಿ ಮಾಧ್ಯಮಿಕ ಶಾಲೆಗಳಲ್ಲಿ ಕಲಿಯುತ್ತಿದ್ದವರ ಪ್ರಮಾಣವು (ಹೆಣ್ಣು ಮಕ್ಕಳ) ಶೇಕಡ 16.7 ಇತ್ತು. ಅದೇ ರೀತಿ ಉನ್ನತ ಶಿಕ್ಷಣ ವ್ಯವಸ್ಥೆಯಲ್ಲಿ ಸಾಕಷ್ಟು ಗಣನೀಯ ಪ್ರಮಾಣದಲ್ಲಿ ಮಹಿಳೆಯರ ದಾಖಲಾತಿ ಹೆಚ್ಚಾಯಿತು.

ಹೀಗೆ 7ನೇ ಪಂಚವಾರ್ಷಿಕ ಯೋಜನೆಯು ಹಲವಾರು ದೃಷ್ಟಿಗಳಿಂದ ಹಿಂದಿನ ಪಂಚವಾರ್ಷಿಕ ಯೋಜನೆಗಳಿಗೆ ಹೋಲಿಸಿದಂತೆ ಮಹಿಳೆಯರಿಗೆ ಹೆಚ್ಚು ನ್ಯಾಯ ಸಿಕ್ಕಿತು. ಆಕೆಯ ಕಲ್ಯಾಣದ ಹೆಸರಿನಲ್ಲಿ ಅನೇಕ ಕಾರ್ಯಯೋಜನೆ ರೂಪುಗೊಂಡವು. ಮಹಿಳಾ ಸಂಘಗಳ ರಚನೆಗೆ ಪ್ರೇರಕಿಯರನ್ನು ಗ್ರಾಮ ಮಟ್ಟ ಮತ್ತು ತಾಲ್ಲೂಕು, ಜಿಲ್ಲಾ ಮಟ್ಟಗಳಲ್ಲಿ ನೇಮಕ ಮಾಡಲಾಗಿತ್ತು. ಈ ದಿಸೆಯಲ್ಲಿ ಮಹಿಳೆಯರನ್ನು ಆರ್ಥಿಕ ಸ್ವಾವಲಂಬನೆಗಳಾಗುವಂತೆ ಮಾಡಲಾಯಿತು.

ಎಂಟನೆಯ ಪಂಚವಾರ್ಷಿಕ ಯೋಜನೆ (1992–1997) ಯಲ್ಲಿಯೂ ಸಹ ಮಹಿಳೆಯರ ಅಭಿವೃದ್ಧಿಗೆ ನೆರವಾಗಲು ಹಲವಾರು ಅಂಶಗಳನ್ನು ಪ್ರಕಟಿಸಿತು.

1) ವಿಭಿನ್ನ ಕ್ಷೇತ್ರಗಳಲ್ಲಿಯೂ ಮಹಿಳೆಯರನ್ನು ಹೊರತುಪಡಿಸದಂತೆ ನೋಡಿಕೊಳ್ಳುವುದು.

2) ಮಹಿಳಾ ಅಭಿವೃದ್ಧಿ ಗುರಿ ಹೊಂದಿ ಮಹಿಳೆಯರಿಗೆ ಲಾಭ ತರುವಂತೆ ವಿವಿಧ ಸಚಿವಾಲಯಗಳಲ್ಲಿ ಹಣಕಾಸು ಸಂಪನ್ಮೂಲವನ್ನು ಮಹಿಳೆ ಪರವಾಗಿ ಗೊತ್ತುಪಡಿಸುವುದು.

3) ಮಹಿಳಾ ಗುಂಪುಗಳನ್ನು ಜಿಲ್ಲಾ ಮಟ್ಟದಲ್ಲಿ ಸಂಘಟಿಸಿ ಗ್ರಾಮೀಣ ಮಹಿಳೆಯರಿಗೆ ತರಬೇತಿ ನೀಡುವುದು, ಮಹಿಳೆಯರಿಗಾಗಿ ತಾಂತ್ರಿಕ ನೆರವು ಸಾಲ ಮತ್ತು ಮಾರುಕಟ್ಟೆ ಸೌಲಭ್ಯಗಳನ್ನು ದೊರಕಿಸುವ ವಿಶೇಷ ಗಮನ ಕೊಡಲಾಯಿತು. ಈ ಯೋಜನೆ ಸಾಧನೆಯಲ್ಲಿ ಮಹಿಳೆಯರಿಗೆ ಮತ್ತೊಂದು ಗರಿ ಮೂಡಿತ್ತೆಂದರೆ ಶೈಕ್ಷಣಿಕ ಕ್ಷೇತ್ರದ ಆದ್ಯತೆ.

4) ಶಿಕ್ಷಣಧ ಎಲ್ಲ ಹಂತಗಳಲ್ಲೂ ಮತ್ತು ಎಲ್ಲಾ ಬಗೆಯ ಕೋರ್ಸುಗಳಲ್ಲೂ ಮಹಿಳೆಯರ ಪ್ರಾತಿನಿಧ್ಯವು ಹೆಚ್ಚಿತು. ಎಂಜಿನಿಯರಿಂಗ್, ವೈದ್ಯಕೀಯ ಮತ್ತು ವೃತ್ತಿ ಶಿಕ್ಷಣ ಕೋರ್ಸುಗಳಲ್ಲಿ ಹುಡುಗಿಯರ ಪಾಲುಗೊಳ್ಳುವಿಕೆ ಗಮನಾರ್ಹವಾಗಿ ಏರಿಕೆಯಾಯಿತು. ಇಷ್ಟೆ ಅಲ್ಲದೆ ಕೃಷಿ–ಕೈಗಾರಿಕೆ ಮತ್ತು ಸೇವಾ ಕ್ಷೇತ್ರಗಳಲ್ಲಿಯೂ ಮಹಿಳಾ ಕಾರ್ಯಕ್ರಮ ಮುಂದುವರಿದವು. ಈ ಯೋಜನೆ ಮಹಿಳೆಯರಿಗಾಗಿ ಪರ್ಯಾಯವಾದ ಪ್ರಜಾಸತ್ತಾತ್ಮಕವಾದ.

ಜಾತ್ಯಾತೀತವಾದ, ಸಹಕಾರಿ ಸಾಮಾಜಿಕ ಸಂರಚನೆಯನ್ನು ಪ್ರತಿಪಾದಿಸಿದೆ. ಇದು ನಾಲ್ಕು ದಶಕಗಳ ಅಭಿವೃದ್ಧಿ ಯೋಜನೆಯನ್ನು ಪರಾಮರ್ಶಿನಿ ಗ್ರಾಮೀಣಾಭಿವೃದ್ಧಿ, ಆರೋಗ್ಯ, ಶಾಸನ, ರಾಜಕೀಯ ಪಾಲುಗೊಳ್ಳುವಿಕೆ, ಶಿಕ್ಷಣ, ಉದ್ಯೋಗ, ಬೆಂಬಲ ಸೇವೆಗಳು, ಸಂವಹನ ಮತ್ತು ಸ್ವಯಂ ಸೇವಾ ಕ್ರಿಯೆ ಮುಂತಾದ ಉಪಕ್ಷೇತ್ರಗಳಿಗೆ ಸಂಬಂಧಿಸಿದಂತೆ ಕ್ರಿಯಾಯೋಜನೆಗಳನ್ನು ರೂಪಿಸಲಾಯಿತು.

1997–2002ರ ಅವಧಿಯಲ್ಲಿ ಒಂಭತ್ತನೆಯ ಪಂಚವಾರ್ಷಿಕ ಯೋಜನೆಯನ್ನು ಜಾರಿಗೊಳಿಸಲಾಯಿತು. ಈ ಯೋಜನೆಯಲ್ಲಿ ಮಹಿಳೆಗೆ ಸಂಬಂಧಿಸಿದ ವಿಶೇಷ ಕಾರ್ಯಗಳ ಮೂಲಕ ಅವಳ ಹಕ್ಕನ್ನು ಹೊಂದುವಂತಾಯಿತು.

1) ಮಹಿಳಾ ಕಲ್ಯಾಣ ಮತ್ತು ಸಾಮಾಜಿಕ ಸೇವೆಗಳಿಗೆ ಸಂಬಂಧಿಸಿದ ಎಲ್ಲಾ ಹಿಂದಿನ ಕಾರ್ಯಕ್ರಮಗಳನ್ನು ಮುಂದುವರಿಸಲಾಯಿತು.

2) ಸ್ವ–ಸಹಾಯ ಗುಂಪುಗಳು ಎಂಬ ಹೊಸ ಗ್ರಾಮೀಣ ಮಹಿಳಾಭಿವೃದ್ಧಿ ಕಾರ್ಯಕ್ರಮವನ್ನು ವ್ಯಾಪಕವಾಗಿ ಜಾರಿಗೊಳಿಸಲಾಯಿತು. ಇದನ್ನೇ ಸ್ತ್ರೀಶಕ್ತಿ ಯೋಜನೆ ಎಂದು ಕರೆಯಲಾಗುತ್ತಿದೆ.

3) ನಗರದ ಕೊಳಗೇರಿಗಳ, ಗ್ರಾಮೀಣ ಮತ್ತು ಬುಡಕಟ್ಟು ಆದಿವಾಸಿ ಮಹಿಳೆಯರ ಸಬಲೀಕರಣಕ್ಕೆ ನೆರವಾಗುವ ಯೋಜನೆಗಳನ್ನು ಜಾರಿಗೊಳಿಸಲು ಸ್ವಯಂ ಸೇವಾ ಸಂಘಗಳಿಗಾಗಿ ಆರ್ಥಿಕ ನೆರವನ್ನು ಮುಂದುವರಿಸಲಾಯಿತು.

4) ಪದವಿವರೆಗಿನ ಶಿಕ್ಷಣವನ್ನು ಹೆಣ್ಣು ಮಕ್ಕಳಿಗೆ ಉಚಿತವಾಗಿ ನೀಡುವುದು.

ಒಟ್ಟಾರೆ ಮಹಿಳಾ ಅಸಮಾನತೆಯನ್ನು ಹೋಗಲಾಡಿಸುವುದಕ್ಕೊಸ್ಕರ ಮಹಿಳೆಯರಿಗೆ ಉನ್ನತ ಶಿಕ್ಷಣ ನೀಡುವುದು ಅತಿ ಅಗತ್ಯವಾಗಿದೆ. 1977ರ ಮಹಿಳಾ ಉನ್ನತ ಶಿಕ್ಷಣ ಆಯೋಗವು ಮಹಿಳೆಯರಿಗೆ ಮತ್ತು ಪುರುಷರಿಗೆ ತಮ್ಮ ವ್ಯಕ್ತಿತ್ವವನ್ನು ರೂಪಿಸಲು, ಸಂಪಾದನೆಯ ಸಾಮರ್ಥ್ಯವನ್ನು ಗಳಿಸಲು ಮತ್ತು ವ್ಯಕ್ತಿತ್ವ ಬೆಳವಣಿಗೆಗೆ ಕಾಲೇಜು ಶಿಕ್ಷಣ ಅಗತ್ಯವೆಂದರೆ ಪ್ರತಿಪಾದಿಸಿತು. ಈ ರೀತಿಯ ಶಿಕ್ಷಣ ಪಡೆಯುವುದರಿಂದ ಲಿಂಗತಾರತಮ್ಯ ಹೋಗಲಾಡಿಸಬಹುದು. ಉನ್ನತ ಶಿಕ್ಷಣದಿಂದ ಮಹಿಳೆಯರಿಗೆ ಆಗುವ ಪ್ರಯೋಜನಗಳೆಂದರೆ, ಮಹಿಳೆಯರು ಆರ್ಥಿಕವಾಗಿ ಸಬಲರಾಗಬಹುದು, ಇನ್ನೂ ಹೆಚ್ಚಿನ ವಿದ್ಯಾಭ್ಯಾಸ ಪಡೆಯಬಹುದು. ಉದ್ಯೋಗ ಭದ್ರತೆ, ಉದ್ಯೋಗಾವಕಾಶಗಳನ್ನು ಬಳಸಿಕೊಳ್ಳುವ ಸಾಮರ್ಥ್ಯ, ಉನ್ನತ ಮಟ್ಟದ ಜೀವನ ಗುಣಮಟ್ಟ ಇತ್ಯಾದಿಗಳನ್ನು ಹೊಂದಬಹುದು.

ಈ ರೀತಿ ಶಿಕ್ಷಣವನ್ನು ಹೊಂದಲು ಹಕ್ಕಿನಲ್ಲಿಯೂ ಮಹಿಳೆಯರಿಗೆ ಅಡೆತಡೆಗಳಿವೆ. ಅವುಗಳೆಂದರೆ ನಮ್ಮ ಸಮಾಜವು ಮಹಿಳಾ ವಿದ್ಯಾಭ್ಯಾಸದ ಅಗತ್ಯತೆಯನ್ನು ಇನ್ನೂ ಮನಗಂಡಿಲ್ಲ. ಕಾರಣ ಪುರುಷ ಪ್ರಧಾನ ನೆಲೆಯಲ್ಲಿ ಯೋಚಿಸುವುದರಿಂದ ಮಹಿಳೆಯರನ್ನು ಮನೆಗೆ ಮಾತ್ರ ಸೀಮಿತ ಎಂಬ ಭಾವನೆಯಿಂದ ಮಹಿಳೆಯರ ವಿದ್ಯಾಭ್ಯಾಸವನ್ನು ನಿರ್ಲಕ್ಷಿಸಲಾಗುತ್ತದೆ. ಅಲ್ಲದೇ ಆಕೆ ಮದುವೆಯಾಗಿ ಬೇರೆಯ ಮನೆಗೆ ಹೋಗುವುದರಿಂದ ಮನೆಯವರೆಗೆ ಯಾವುದೇ ಲಾಭವಿಲ್ಲ ಎಂಬ ಲೆಕ್ಕಾಚಾರ ಪಾಲಕರದು.

ಒಂದು ವೇಳೆ ಆಕೆಗೆ ಶಿಕ್ಷಣ ದೊರಕಿದರೂ ಅದು ಕೆಳಮಟ್ಟದ ಶಿಕ್ಷಣ. ಯಾವುದೇ ಗುಣಮಟ್ಟದ ಶಿಕ್ಷಣ ಸಿಗುತ್ತಿಲ್ಲ. ಹಾಗಾಗಿ ಎಲ್ಲ ವಿಶ್ವವಿದ್ಯಾನಿಲಯದವರೆಗೂ ಬಾಲಕಿಯರಿಗೆ ಶುಲ್ಕ ವಿನಾಯಿತಿ ನೀಡಬೇಕು. ಅಲ್ಲದೆ ಪ್ರತ್ಯೇಕ ಮಹಿಳಾ ಶಾಲಾ ಕಾಲೇಜು ತೆರೆಯುವುದು, ಆಗ ಪಾಲಕರು ಆತಂಕವಿಲ್ಲದೆ ಮಹಿಳೆಯರಿಎ ಶಿಕ್ಷಣ ಕೊಡುತ್ತಾರೆ. ಹೆಣ್ಣು ಮಕ್ಕಳ ಶಿಕ್ಷಣದ ಅಗತ್ಯ ಕುರಿತಂತೆ ಸರ್ಕಾರ ಹಾಗೂ ಸರ್ಕಾರೇತರ ಸಂಸ್ಥೆಗಳು, ಪಾಲಕರು, ಶಿಕ್ಷಕರು, ಸ್ವಯಂ ಸೇವಾ ಸಂಸ್ಥೆಗಳು ಒಟ್ಟಾಗಿ ಕಾರ್ಯಯೋಜನೆಯನ್ನು ರೂಪಿಸಿದರೆ ಪ್ರತಿಯೊಬ್ಬ ಹೆಣ್ಣುಮಕ್ಕಳಿಗೂ ಸಂಪೂರ್ಣವಾಗಿ ಶಿಕ್ಷಣದ ಹಕ್ಕು ಸಿಗುವುದು ಖಂಡಿತ.

**ಸಬಲೀಕರಣದ ನೆಲೆಯಲ್ಲಿ ಮಹಿಳಾ ಹಕ್ಕುಗಳು :**

ಒಂದು ಮಗು ಹುಟ್ಟಿದ ನಂತರ ಸಮಾಜದ ತನ್ನ ಸುತ್ತಮುತ್ತಲಿನ ಪರಿಸರದೊಂದಿಗೆ ಹೊಂದಾಣಿಕೆ ಮಾಡಲು ಪ್ರಾರಂಭಿಸುತ್ತದೆ. ತಂದೆ, ತಾಯಿ, ಸ್ನೇಹಿತರು, ಅಕ್ಕಪಕ್ಕದವರು, ಶಾಲೆ, ಹೊರ ಜಗತ್ತು ಹಾಗೂ ಸುತ್ತಲಿನ ಸಂಬಂಧಗಳನ್ನು ಗಟ್ಟಿಗೊಳಿಸುತ್ತಾ ಹೋಗುತ್ತದೆ. ಬಾಲ್ಯದಿಂದಲೇ ಕೌಟುಂಬಿಕ ಪರಿಸರದಲ್ಲಿ ಸಮಾಜ ತನಗೆ ಬೇಕಾದಂತೆ ಹೆಣ್ಣು ಗಂಡು ಮಕ್ಕಳನ್ನು ನಿರ್ಮಾಣ ಮಾಡಿಕೊಡುತ್ತದೆ. 'ವಿಧೇಯತೆ' ಎನ್ನುವ ಮೌಲ್ಯವು ಪುರುಷ ಪ್ರಧಾನ ನೆಲೆಯಲ್ಲಿ ಹೆಣ್ಣನ್ನು ತನ್ನ ಅಧೀನದಲ್ಲಿ ಒಳಪಡಿಸಿಕೊಳ್ಳುವ ಒಂದು ಅಸ್ತ್ರವಾಗಿದೆ. ಅಲ್ಲದೆ ಹೆಣ್ಣಿಗೆ ಅನಾದಿ ಕಾಲದಿಂದಲೂ ಬೋಧಿಸುವ ವಿಚಾರಗಳೆಂದರೆ 'ಕನ್ಯತ್ವ' ಹಾಗೂ 'ಪಾತಿವ್ರತ್ಯ' ಇವಷ್ಟನ್ನು ಆಕೆ ಮನಗಂಡ ತನ್ನ ಶುದ್ಧತೆಯ ನೆಲೆಯಲ್ಲಿ ಬದುಕಬೇಕಾಗಿದೆ. ಕಾಲದಿಂದ ಕಾಲಕ್ಕೆ ಸಮಾನ ವ್ಯವಸ್ಥೆಯಲ್ಲಿ ಉಂಟಾದ ಬೆಳವಣಿಗೆಗಳು ಬದಲಾವಣೆಗಳಿಗನುಗುಣವಾಗಿ ಸ್ತ್ರೀ ಪುರುಷ ಮಾದರಿಗಳಲ್ಲಿ ಸಾಕಷ್ಟು ಸಾಮಾಜಿಕ ನಿರೀಕ್ಷೆಗಳು, ಬದಲಾವಣೆಗಳೂ ಉಂಟಾಗುತ್ತವೆ.

ಹೆಣ್ಣಿನ ದೈಹಿಕ, ಬೌದ್ಧಿಕ ದುಡಿಮೆಗಳನ್ನು ಪುರುಷ ಪ್ರಧಾನ ವ್ಯವಸ್ಥೆ ಇಂದಿಗೂ ಅಷ್ಟೇನೂ ಪರಿಗಣಿತವಾಗಿ ಕಂಡಿಲ್ಲ. ಮುಖ್ಯವಾಗಿ ಹೆಣ್ಣು ತನ್ನೊಳಗೆ ಅಂತರ್ಗತಗೊಂಡಿರುವ ಸಾಂಸ್ಕೃತಿಕ ಮೌಲ್ಯಗಳಿಂದ ಬಿಡಿಸಿಕೊಂಡು ತನ್ನದೇ ಆದ ಗಟ್ಟಿ ವ್ಯಕ್ತಿತ್ವವನ್ನು ರೂಪಿಸಿಕೊಳ್ಳುವುದು ನಿಜಕ್ಕೂ ಸಾಹಸಕರವಾಗಿದೆ. ಹೆಣ್ಣಿನೊಂದಿಗೆ ದುಡಿಮೆ ಅಂಟಿಕೊಂಡೇ ಬಂದಿರುವಂತಹದ್ದು. ಅವಳ ಬದುಕು ಯಾಂತ್ರಿಕವಾದುದು. ಆಕೆ ಮಾಡುವ ಕೆಲಸಗಳಿಂದ ಆಕೆಗೆ ಯಾವುದೇ ರೀತಿಯ ಆರ್ಥಿಕ ಆರಾಮವೂ ಸಂದಾವಾಗುತ್ತಿರಲಿಲ್ಲ. ಈ ರೀತಿಯಲ್ಲಿನ ಆಕೆಯ ಮುಕ್ತಗೊಳಿಸುವ ನೆಲೆಯು ಮಹಿಳಾ ಸಬಲೀಕರಣ ಎಂಬ ಆಯಾಮವನ್ನು ತಂದಿರುವುದು.

ಸಬಲೀಕರಣ ಎಂದರೆ ಬೇರೆ ಬೇರೆ ಅರ್ಥಗಳಿವೆ. ಅವುಗಳೆಂದರೆ 'ಅಧಿಕಾರ ನೀಡುವುದು' ತನ್ನೊಳಗೆ ಅಧಿಕಾರ ಸೃಷ್ಟಿಸುವುದು ಮತ್ತು ಸಮರ್ಥರನ್ನಾಗಿಸುವುದು. ಕಾನೂನಿನ ಹಕ್ಕುಗಳನ್ನು ನೀಡು, ವಿಭಿನ್ನ ಅರ್ಥವನ್ನು ಕಾಣಬಹುದು. ಸಬಲೀಕರಣವು ಮಹಿಳೆಯರ ಸ್ವಾವಲಂಬನೆಯನ್ನು ಹೆಚ್ಚಿಸುವುದು. ತಮ್ಮದೇ ಜೀವನವನ್ನು ರೂಪಿಸಲು ಅಗತ್ಯವಾದ ವೈಯಕ್ತಿಕ ಹಕ್ಕನ್ನು ಪ್ರತಿಪಾದಿಸುವುದು ಮತ್ತು ತಮ್ಮ ಅಧೀನತೆಯನ್ನು ಪ್ರಶ್ನಿಸಿ ನಿವಾರಿಸುವ ಒಂದು ಪ್ರಕ್ರಿಯೆಯಾಗಿದೆ ಇಂದು ಮಹಿಳೆಯರ ಸಬಲೀಕರಣಕ್ಕೆ ಹೆಚ್ಚಿನ ಒತ್ತು ನೀಡಲಾಗುತ್ತಿದೆ.

ಸರ್ಕಾರ ಮಹಿಳೆಯರ ಸಬಲೀಕರಣಕ್ಕೆ ಅನುಸರಿಸಿದ ಸಮಗ್ರ ನೀತಿಯ ಒಂದು ಭಾಗವಾಗಿ 1992ರಲ್ಲಿ ರಾಷ್ಟ್ರೀಯ ಮಹಿಳಾ ಆಯೋಗವನ್ನು ಮತ್ತು 1993ರಲ್ಲಿ ರಾಷ್ಟ್ರೀಯ ಮಹಿಳಾ ಕೋಶವನ್ನು ನೇಮಿಸಿತು. ಅಲ್ಲದೆ ಇದಕ್ಕೂ ಮೊದಲು 1980ರಲ್ಲಿ ಮಹಿಳಾ ಸ್ವಾವಲಂಬನೆ ಹೆಚ್ಚಿಸುವುದಕ್ಕಾಗಿ ಮಹಿಳಾ ವಿಕಾಸ ಹಾಗೂ ಮಹಿಳಾ ಸಮುಖ್ಯ ಕಾರ್ಯಕ್ರಮಗಳನ್ನು ರಾಜ್ಯ ಯೋಜಿಸಿತು.

ಸಬಲೀಕರಣ ಅಥವಾ ಸಶಕ್ತೀಕರಣ ಎಂಬ ಪದ ಇತ್ತೀಚಿನ ವರ್ಷಗಳಲ್ಲಿ ಮಹಿಳೆಯರಿಗೆ ಸಂಬಂಧಿಸಿದಂತೆ ವ್ಯಾಪಕವಾಗಿ ಬಳಸಲಾಗುತ್ತಿದೆ. ಇದನ್ನೇ ಪರ್ಯಾಯ ಪದಗಳಾಗಿ ಮಹಿಳಾ ಅಭಿವೃದ್ಧಿ, ಮಹಿಳಾ ಕಲ್ಯಾಣ, ಮಹಿಳಾ ಜಾಗೃತಿ, ಮಹಿಳಾ ಪ್ರಗತಿ ಹೀಗೆ ವಿಶಾಲವಾದ ಅರ್ಥವಾಗಿ ಬಳಸಲಾಗುತ್ತಿದೆ. ಮಹಿಳಾ ಸಬಲೀಕರಣ ಎನ್ನುವುದು ಮಹಿಳೆಯರಲ್ಲಿ ವಿವಿಧ ಕ್ಷೇತ್ರಗಳಿಗೆ ಸಂಬಂಧಿಸಿದ ಶಕ್ತಿ ಮತ್ತು ಸಾಮರ್ಥ್ಯಗಳನ್ನು ಅರ್ಥೈಸಿಕೊಳ್ಳಲು ಸಹಕಾರಿಯಾಗಿದೆ. ಸಂಕ್ಷಿಪ್ತವಾಗಿ ಹೇಳುವುದಾದರೆ ಮಹಿಳೆಯರು ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ವಿಚಾರಗಳಿಗೆ ಸಂಬಂಧಿಸಿದಂತೆ ಸ್ವಯಂ ನಿರ್ಧಾರ ತೆಗೆದುಕೊಳ್ಳುವ ಪ್ರಕ್ರಿಯೆ ಎಂದು ಹೇಳಬಹುದು.

ಈ ರೀತಿ ಮಹಿಳೆ ಸಬಲೀಕರಣ ಹೊಂದಲು ನೆರವಾದವು. ಸ್ತ್ರೀಶಕ್ತಿ ಯೋಜನೆಗಳು ಇವುಗಳಿಂದ ಸಬಲೀಕರಣದ ವ್ಯಾಪ್ತಿ ವಿಸ್ತರಿಸಿತು. ಗ್ರಾಮೀಣ ಕುಟುಂಬಗಳು ಉದ್ಯೋಗ, ಆಸ್ತಿ, ಶಿಕ್ಷಣ ಮತ್ತು ಕೌಶಲ್ಯರ ಕೊರತೆಯಿಂದ ಬಳಲುತ್ತಿರುವಾಗ ಈ ಸ್ತ್ರೀ ಶಕ್ತಿ ಯೋಜನೆಗಳು ಮಹಿಳೆಯರನ್ನು ಹೆಚ್ಚು ಸ್ವಾವಲಂಬಿಗಳಾಗಿ ಆಂತರಿಕ ಶಕ್ತಿಯನ್ನು ಬೆಳೆಸಿಕೊಳ್ಳಲು ಸಹಕಾರಿಯಾದವು. ಅಂದರೆ ಕೇವಲ ನಿರ್ಧಾರ ಕೈಗೊಳ್ಳುವ ಹಕ್ಕನ್ನು ಸಂಪಾದಿಸುವುದೇ ಸಬಲೀಕರಣವಲ್ಲ. ಮಹಿಳೆಯರು ತಮ್ಮನ್ನು ತಾವು ಸಮರ್ಥರು, ನಿರ್ಧಾರ ಕೈಗೊಳ್ಳುವ ಶಕ್ತಿ ಇರುವವರು ಎಂದು ಮನಗಂಡರು. ಅಲ್ಲದೆ ಸಂಪನ್ಮೂಲಗಳ ಮೇಲೆ ನಿಯಂತ್ರಣ ಹೊಂದುವುದು ಆತ್ಮವಿಶ್ವಾಸ, ಅರಿವು ಆತ್ಮಗೌರವ ಬೆಳೆಸಿಕೊಂಡು ಸ್ವಂತ ನಿರ್ಧಾರ ಕೈಗೊಳ್ಳುವ ಸಾಮರ್ಥ್ಯವನ್ನು ಪಡೆಯುವ ಪ್ರಕ್ರಿಯೆ ಮಹಿಳಾ ಸಬಲೀಕರಣ ಸಾಮಾಜಿಕ ಸಬಲೀಕರಣದಲ್ಲಿ ಸಮಾಜಿಕ ಸಮಾನತೆ, ಅವಕಾಶ ಮಾನ್ಯತೆ ಮತ್ತು ಎಲ್ಲಕ್ಕಿಂತ ಮುಖ್ಯವಾಗಿ ಸ್ಥಾನಮಾನದಲ್ಲಿ ಸಮಾನತೆ ದೊರಕಿಸಿಕೊಳ್ಳುವುದು. ನಮ್ಮ ಭಾರತ ಸಂವಿಧಾನ ಮಹಿಳೆಯರಿಗೆ ನೀಡುತ್ತದೆ ಮತ್ತು ಮೂಲಭೂತ ಹಕ್ಕುಗಳು ಕಾನೂನಿನ ಮುಂದೆ ಎಲ್ಲರೂ ಸಮಾನರು ಎಂದು ಘೋಷಿಸುತ್ತದೆ ಮತ್ತು ಧರ್ಮ, ಜನಾಂಗ, ಲಿಂಗ ಅಥವಾ ಜಾತಿಯನ್ನು ಆಧರಿಸಿ ತಾರತಮ್ಯ ಮಾಡುವುದನ್ನು ನಿಷೇಧಿಸುತ್ತದೆ. ಆದರೂ ಇವುಗಳ ಅರಿವು ಗ್ರಾಮೀಣ ಮಹಿಳೆಯಲ್ಲಿ ಮೂಡುವಲ್ಲಿ ಈ ಸ್ತ್ರೀಶಕ್ತಿ ಯೋಜನೆಗಳು ನೆರವಾಗಿವೆ.

ಗ್ರಾಮೀಣ ಪ್ರದೇಶದ ಮಹಿಳೆಯರ ಸಾಮಾಜಿಕ, ಆರ್ಥಿಕ ಹಾಗೂ ಸಾಂಸ್ಕೃತಿಕ ಅಭಿವೃದ್ಧಿಗಾಗಿ ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಅನೇಕ ಯೋಜನೆ ಮತ್ತು ಕಾರ್ಯಕ್ರಮಗಳನ್ನು ಜಾರಿಗೊಳಿಸಿವೆ. ವಿವಿಧ ಯೋಜನೆಗಳು ಮಹಿಳೆಯರ ಆರ್ಥಿಕ ಪ್ರಗತಿ ಹಾಗೂ ಸ್ವಾವಲಂಬನೆಗಾಗಿ ಜಾರಿಗೊಳಿಸಿದ್ದರೂ ಅವುಗಳು ಅಪೇಕ್ಷಿತ ಫಲಿತಾಂಶಗಳನ್ನು

ನೀಡಿಲ್ಲ. ಈ ದಿಸೆಯಲ್ಲಿ ರಾಷ್ಟ್ರೀಯ ಶಿಕ್ಷಣ ನೀತಿಗಳನ್ನು ರೂಪಿಸಲಾಯಿತು. 1986ರಲ್ಲಿ ರಾಷ್ಟ್ರೀಯ ಶಿಕ್ಷಣ ನೀತಿಯು ಮಹಿಳೆಯರಿಗೆ ಯಾವುದೇ ತಾರತಮ್ಯ ಮಾಡದೆ, ಅವರ ಸ್ಥಾನಮಾನ ಹಾಗೂ ಅಭಿವೃದ್ಧಿ ಪಡಿಸಲು ಹಲವು ಅಂಶಗಳನ್ನು ಜಾರಿಗೆ ತಂದವು. ಹಾಗೆಯೇ 1992ರಲ್ಲಿ ಸ್ತ್ರೀಯರಲ್ಲಿ ಸ್ವಾವಲಂಬನೆ ಮತ್ತು ಆತ್ಮವಿಶ್ವಾಸವನ್ನು ವೃದ್ಧಿಸಲು ಕಾರ್ಯಯೋಜನೆಗಳನ್ನು ರೂಪಿಸಲಾಯಿತು.

2001 ಮಾರ್ಚ್ 20ರಂದು ರಾಷ್ಟ್ರೀಯ ಮಹಿಳಾ ಸಬಲೀಕರಣ ನೀತಿಯನ್ನು ಪ್ರಕಟಿಸಲಾಯಿತು. ಇದನ್ನು ಮೊದಲೇ 1995ರಲ್ಲಿ ಬೀಜಿಂಗ್‌ನಲ್ಲಿ ನಡೆದು 4ನೇ ಮಹಿಳಾ ಜಾಗತಿಕ ಸಮ್ಮೇಳನದಲ್ಲಿ ಅನುಮೋದಿಸಲಾಗಿತ್ತು. ಇದರ ಮುಖ್ಯ ಅಂಶಗಳೆಂದರೆ,

1) ಸಾಮಾಜಿಕ ಮತ್ತು ದೃಷ್ಟಿಕೋನದ ಬದಲಾವಣೆಯಿಂದ ಮಹಿಳಾ ಸಬಲೀಕರಣ

2) ಮಹಿಳೆಯರಿಗೆ ಸಂಬಂಧಿಸಿದಂತೆ ಎಲ್ಲಾ ತಾರತಮ್ಯಗಳನ್ನು ತೆಗೆದುಹಾಕುವುದು.

3) ಸಾಮಾಜಿಕ ಹಾಗೂ ಆರ್ಥಿಕ ಕ್ಷೇತ್ರದಲ್ಲಿ ಮಹಿಳೆಯರ ಭಾಗವಹಿಸುವಿಕೆಗೆ ಅವಕಾಶ.

4) ಮಾನವಿಕ ಅಭಿವೃದ್ಧಿಯಲ್ಲಿ ಮಹಿಳಾ ಅಭಿವೃದ್ಧಿಗೆ ಹೆಚ್ಚಿನ ಪ್ರಾಶಸ್ತ್ಯ.

5) ಆರ್ಥಿಕ ಅಭಿವೃದ್ಧಿಯ ನಿರ್ಣಯಗಳಲ್ಲಿ ಮಹಿಳೆಯರ ವಿಚಾರಗಳನ್ನು ಪರಿಗಣನೆಗೆ ತೆಗೆದುಕೊಳ್ಳುವುದು.

6) ಸಾಮಾಜಿ, ಸಬಲೀಕರಣ, ಆರ್ಥಿಕ ಸಬಲೀಕರಣವನ್ನು ಸಾಧಿಸುವಿಕೆ ಮತ್ತು ಲಿಂಗಭೇದ ಭಾವದ ಅನ್ಯಾಯವನ್ನು ಹೋಗಲಾಡಿಸುವುದು.

ಇವುಗಳೇ ಅಲ್ಲದೆ ಮಹಿಳಾ ಅಭಿವೃದ್ಧಿಗೆ ಮಹಿಳಾ ಸಮುಖ್ಯ ಯೋಜನೆ, ರಾಜೀವ್ ಗಾಂಧಿ ಶಿಕ್ಷಣ ಭರವಸೆಯ ಯೋಜನೆ, ಶಿಕ್ಷಕರ ತರಬೇತಿಗಳು, ಸ್ತ್ರೀಶಕ್ತಿ ಯೋಜನೆ ಹೀಗೆ ಇನ್ನೂ ಹಲವಾರು ಯೋಜನೆಗಳು ಇಂದು ಮಹಿಳೆಯಯನ್ನು ಸಬಲೆಯರನ್ನಾಗಿಸಲು ನೆರವಾಗಿವೆ. ಹೀಗಿದ್ದರೂ ಸಹ ಭಾರತದ ಗ್ರಾಮೀಣ ಮಹಿಳೆಯರ ಸ್ಥಿತಿಗತಿಗಳು ಇನ್ನೂ ಸುಧಾರಿಸಿಲ್ಲ. ಈ ಮಹಿಳಾ ಸಬಲೀಕರಣ ಮತ್ತು ಅಭಿವೃದ್ಧಿಯೆಂಬುದು ಅತ್ಯಂತ ತುರ್ತಿನ ವಿಚಾರ. ಶತಮಾನಗಳಿಂದ ಜಡ್ಡುಗಟ್ಟಿ ಹೂತು ಹೋಗಿದ್ದ ಸ್ತ್ರೀಯರ ವೈಮನಸ್ಸುಗಳು ಹೊಸದೊಂದು ಬೆಳಕಿಗೆ ತೆರೆದುಕೊಳ್ಳಲು ಸ್ವಲ್ಪ ಇರುಸು ಮುರುಸಾಗಿದೆ. ಆದ ಕಾರಣ ಸರ್ಕಾರ ಹಾಗೂ ಸರ್ಕಾರೇತರ ಸಂಸ್ಥೆಗಳು ತಮ್ಮ ಕಾರ್ಯಯೋಜನೆಗಳನ್ನು ಮತ್ತಷ್ಟು ಪ್ರದರ್ಶಿಸಬೇಕಿದೆ. ಭಾರತದಲ್ಲಿ ಶೇಕಡ ಅರ್ಧದಷ್ಟಿರುವ ಮಹಿಳೆಯ ಉದ್ಧಾರವಾಗದ ಹೊರತು ಯಾವುದೇ ಸಮಾಜವಾಗಲೀ, ರಾಷ್ಟ್ರವಾಗಲೀ ಅಭಿವೃದ್ಧಿ ಹೊಂದಲು ಸಾಧ್ಯವೇ ಇಲ್ಲ.

ಈ ಹಿನ್ನೆಲೆಯಲ್ಲಿ ಮಹಿಳಾ ಸಬಲೀಕರಣವನ್ನು ದೊಡ್ಡ ಆಂದೋಲನವನ್ನಾಗಿಸುವುದು ಅತ್ಯಗತ್ಯವಾಗಿದೆ. ಈ ನಿಟ್ಟಿನಲ್ಲಿ ಸರ್ಕಾರದ ಜೊತೆಗೆ ಹಲವಾರು ಸರ್ಕಾರೇತರ ಸಂಸ್ಥೆಗಳು ರಾಷ್ಟ್ರ ಹಾಗೂ ರಾಜ್ಯದಲ್ಲಿ ಸಣ್ಣ ಸಣ್ಣ ಗುಂಪುಗಳನ್ನು ಸಂಘಟಿಸಿ ಅವರಲ್ಲಿ ಉಳಿತಾಯ ಮನೋಭಾವವನ್ನು ಪ್ರೇರೇಪಿಸುವುದರೊಂದಿಗೆ ಅವರನ್ನು ಆರ್ಥಿಕವಾಗಿ

ಸದೃಢರನ್ನಾಗಿಸುವುದು. ಅಲ್ಲದೆ ಉಳಿತಾಯದ ಹಣ್ಣದಲ್ಲಿ ತಮ್ಮ ದಿನನಿತ್ಯದ ಬೇಡಿಕೆ ಹಾಗೂ ಇತರೇ ಆರ್ಥಿಕ ಸಂಪನ್ಮೂಲಗಳನ್ನು ವೃದ್ಧಿಪಡಿಸುವುದಲ್ಲದೇ ಸಾಲ ನಿರ್ವಹಣೆಯ ರೂಢಿಯನ್ನು ಸಹ ಮಾಡಿಕೊಂಡು ಬಡತನ ನಿರ್ಮೂಲನೆಗೆ ಚಾಲನೆ ನೀಡುತ್ತಿದ್ದಾರೆ.

ಮಹಿಳಾ ಸಬಲೀಕರಣ ಎನ್ನುವುದು ಮಹಿಳೆಯರಲ್ಲಿ ಅಸಾಧಾರಣ ಚಲನಾತ್ಮಕ ಹಾಗೂ ಪ್ರಜಾಸತ್ತಾತ್ಮಕ ಬದಲಾವಣೆ. ಆದ್ದರಿಂದ ಅವರಿಗೆ ಆರ್ಥಿಕ ಸ್ವಾವಲಂಬನೆ ಹಾಗೂ ಸಾಮಾಜಿಕ ಸ್ವಾತಂತ್ರ್ಯ ಸಿಗುವುದು ಮೊದಲ ಆದ್ಯತೆ. ಮಹಿಳೆಯರು ಯಾರ ಮರ್ಜಿಗೆ ಒಳಗಾಗದೇ ತಾವೇ ತಾವಾಗಿ ಬಲಯುತವಾಗಿ ಎದ್ದು ನಿಂತು ತಮ್ಮ ಹಕ್ಕುಗಳನ್ನು ಪ್ರತಿಪಾದಿಸುವ ಪ್ರಕ್ರಿಯೆಯೇ ಸಬಲೀಕರಣದ ನೆಲೆ. ಪರಕೀಯ ಅಥವಾ ಬಾಹ್ಯ ಅನುಕಂಪಕ್ಕೆ ಒಳಗಾಗದೇ ಸ್ವಂತವಾಗಿ ನೈಜವಾಗಿ ಶ್ರಮದಿಂದ ಬಲಗೊಳ್ಳುವ ಪ್ರಕ್ರಿಯೆ ಇದಾಗಿದೆ.

ಈ ಸ್ತ್ರೀಶಕ್ತಿ ಯೋಜನೆಗಳಿಂದ ಮಹಿಳಾ ಸಬಲೀಕರಣಗೊಂಡಿರುವುದನ್ನು ಈ ಕೆಳಕಂಡ ಅಂಶಗಳಿಂದ ಮನಗಾಣಬಹುದು.

1) ಗ್ರಾಮೀಣ ಬಡ ಮಹಿಳೆಯರಲ್ಲಿ ಐಕ್ಯತೆ ಹಾಗೂ ಒಗ್ಗಟ್ಟು ಮೂಡಿಸುವಲ್ಲಿ ಇದು ಯಶಸ್ವಿಯಾಗಿದೆ.

2) ಸಾಮಾಜಿಕ ಹಾಗೂ ಆರ್ಥಿಕ ಜಾಗೃತಿ ಮೂಡಿಸುವಲ್ಲಿ ಸ್ತ್ರೀಶಕ್ತಿ ಸಂಘಗಳು ಕಾರಣವಾಗಿವೆ.

3) ಮಹಿಳೆಯರು ಸ್ವಂತ ಉದ್ಯೋಗ ಹಾಗೂ ವೃತ್ತಿ ಕೈಗೊಳ್ಳಲು ಸಹಕಾರಿಯಾಗಿದೆ.

4) ಆರ್ಥಿಕ ಸ್ವಾವಲಂಬನೆ ಹಾಗೂ ಜ್ಞಾನ ಮೂಡಿಸುವಲ್ಲಿ ಪರಿಣಾಮಕಾರಿಯಾಗಿದೆ.

5) ಬಡ ಕುಟುಂಬಗಳ ಮಕ್ಕಳ ಶಿಕ್ಷಣ, ಕುಟುಂಬದ ಆರೋಗ್ಯ ಹಾಗೂ ಜೀವನ ಮಟ್ಟು ಸುಧಾರಿಸಲು ಸಾಧ್ಯವಾಗಿದೆ.

6) ಗ್ರಾಮೀಣ ಬಡಕುಟುಂಬ ಮಟ್ಟದಲ್ಲಿನ ಸ್ಥಾನಮಾನ ಹೆಚ್ಚಳವಾಗಿದೆ.

7) ಮಹಿಳೆಯರಲ್ಲಿ ಆತ್ಮವಿಶ್ವಾಸ, ಆತ್ಮಗೌರವ ಹಾಗೂ ಉದ್ಯಮ ಪ್ರವೃತ್ತಿ ಬೆಳೆಯಲು ಸಾಧ್ಯವಾಗಿದೆ.

8) ಮಹಿಳೆಯರಲ್ಲಿ ರಾಜಕೀಯ ಜಾಗೃತಿ ಹೆಚ್ಚಾಗುತ್ತಿದ್ದು ರಾಜಕೀಯ ಭಾಗವಹಿಸುವಿಕೆಯಲ್ಲಿ ಗಮನಾರ್ಹ ಪ್ರಗತಿ ಕಂಡುಬರುತ್ತಿವೆ ಸ್ಥಳೀಯ ಸರ್ಕಾರಗಳಲ್ಲಿ ಗ್ರಾಮೀಣ ಬಡ ಮಹಿಳೆಯರು ಹೆಚ್ಚಿನ ಪ್ರಾತಿನಿಧ್ಯ ಪಡೆಯಲು ಸಾಧ್ಯವಾಗುತ್ತಿದೆ

ಪ್ರಸ್ತುತ ಏನೆಲ್ಲಾ ಬದಲಾವಣೆಗಳನ್ನು ಕಂಡರೂ ಸಹ ನಮ್ಮಲ್ಲಿ ಕೆಲವು ಪ್ರಶ್ನೆಗಳು ಏಳುತ್ತಲೇ ಇವೆ. ಅಂದರೆ ಮಹಿಳೆ ತನ್ನ ಮೇಲೆ ನಡೆಯುವ ಶೋಷಣೆ ಅಸಮಾನತೆಗಳನ್ನು ಇನ್ನೂ ಏತಕ್ಕೆ ಸಹಿಸಿಕೊಳ್ಳುತ್ತಿದ್ದಾಳೆ? ತಾನು ದಿಟ್ಟತನದಿಂದ ಆತ್ಮವಿಶ್ವಾಸದಿಂದ ಮನುಷ್ಯಳಂತೆ ಬದುಕಬಲ್ಲ ಶಕ್ತಿ ತನ್ನಲ್ಲಿದೆ ಎಂದು ಇವರಿಗೇಕೆ ಅರಿವಾಗದು? ಬದಲಾಗುತ್ತಿರುವ ಕಾಲದ ಹೆಜ್ಜೆ ಸಪ್ಪಳ ಇವರಿಗೇಕೆ ಕೇಳಿಸದು? ಹತ್ತಾರು ಪ್ರಶ್ನೆಗಳು ಬಾದಿಸುತ್ತಿವೆ. ಇದಕ್ಕೆ ಕಾರಣ ಹುಡುಕ ಹೊರಟರೆ ಹಲವು ಬಹಳ ಪ್ರಮುಖವಾದದ್ದು ಜಾಗೃತ ಶಿಕ್ಷಣದ ಕೊರತೆ.

**ಮಹಿಳೆ ಮತ್ತು ಮೀಸಲಾತಿ :**

ಮೀಸಲಾತಿಯು ರಾಜಕೀಯ ಪ್ರಶ್ನೆಯಾಗಿರುವುದು ಈಗ ಮಾತ್ರವಲ್ಲ. ಇತಿಹಾಸದ ಪುಟಗಳಲ್ಲಿ ಹಿಂದಕ್ಕೆ ಹೋದರೆ ಈ ಪ್ರಶ್ನೆ ನಮ್ಮ ರಾಷ್ಟ್ರೀಯ ಚಳುವಳಿಯ ಹಂತದಲ್ಲಿಯೇ ರಾಜಕೀಯ ಪ್ರಶ್ನೆಯಾಗಿರುವುದನ್ನು ನಾವು ಗಮನಿಸಬಹುದಾಗಿದೆ. 1957 ಜನವರಿಯಲ್ಲಿ ಸ್ಥಳೀಯ ಸಂಸ್ಥೆ ಬಲಪಡಿಸಲು ರಚಿತವಾದ ಬಲವಂತರಾಯ್ ಸಮಿತಿ ಮಹಿಳೆಯರಿಗೆ ಮೀಸಲಾತಿಯನ್ನು ನೀಡುವ ಅಗತ್ಯವನ್ನು ಒತ್ತಿ ಹೇಳಿತು. ಉತ್ತರ ಪ್ರದೇಶ ಬಿಟ್ಟರೆ ಮಿಕ್ಕೆಲ್ಲ ರಾಜ್ಯಗಳೂ ಈ ವರದಿಯನ್ನು ಒಪ್ಪಿಕೊಂಡಿದ್ದವು. ಈ ನಿಟ್ಟಿನಲ್ಲಿ ಪಂಚಾಯತ್ ವ್ಯವಸ್ಥೆಯಲ್ಲಿ ಮಹಿಳೆಯರಿಗೆ ಶಾಸನಬದ್ಧ ಮೀಸಲಾತಿ ನೀಡುವ ಪ್ರಯತ್ನ ಮೊದಲು ನಡೆದದ್ದು ಕರ್ನಾಟಕದ ಜನತಾಪಕ್ಷ ಸರ್ಕಾರದಿಂದ 1983 ರಲ್ಲಿ ಕಾಯಿದೆ ತಿದ್ದುಪಡಿ ತಂದ ಸರ್ಕಾರ ಶೇಕಡ 25 ರಷ್ಟು ಸ್ಥಾನವನ್ನು ಮಹಿಳೆಯರಿಗೆ ಕಡ್ಡಾಯ ಮಾಡಿತು. 1987 ರಲ್ಲಿ ಪಂಚಾಯತ್ ಚುನಾವಣೆಯಲ್ಲಿ ಇದನ್ನು ಜಾರಿಗೆ ತರಲಾಯಿತು. ದೇಶದಲ್ಲಿ ಮೊದಲ ಬಾರಿಗೆ ನೂರಾರು ಮಹಿಳೆಯರು ಚುನಾಯಿತರಾದರು.

1990 ರಲ್ಲಿ ಈ ಪಂಚಾಯತ್ ಮೀಸಲಾತಿ ಬಿಲ್ ಅಂಗೀಕಾರವಾಗುವಾಗ ಈಗಿನ ಮಟ್ಟಗಿನ ಚರ್ಚೆಗಳಿರದೆ ಸುಲಭವಾಗಿ ಅಂಗೀಕೃತವಾಯಿತು. ಸಂವಿಧಾನದ 73 ಹಾಗೂ 74ನೇ ತಿದ್ದುಪಡಿಯು ಅಂಗೀಕಾರದಿಂದ ಮಹಿಳೆಯರಿಗೆ ಪಂಚಾಯತ್ ಸಂಸ್ಥೆಗಳಲ್ಲಿ ಮೀಸಲತಿ ದೊರೆತು ಲಕ್ಷಾಂತರ ಮಹಿಳೆಯರು ರಾಜಕೀಯ ಮುಖ್ಯ ವಾಹಿನಿಯಲ್ಲಿ ಸೇರಿಕೊಳ್ಳುವಂತಾಯಿತು.

ಸ್ತ್ರೀಯರು ಸಾರ್ವಜನಿಕ ಬದುಕಿನಲ್ಲಿ ಕಾಣಿಸಿಕೊಂಡಿರುವುದು ಹೆಚ್ಚಾಗಿ ಕಲಾವಿದೆಯರಾಗಿಯೇ ಅವರು ರಾಜಕೀಯ ನಾಯಕಿಯರಾಗಿ ಕಾಣಿಸಿಕೊಂಡಿರುವವರು ತೀರಾ ಅಪರೂಪ. ದೇಶದ ಪ್ರಧಾನ ಮಂತ್ರಿಗಳಾಗಿ, ಕೇಂದ್ರ ಹಾಗೂ ರಾಜ್ಯಮಟ್ಟದ ಸಚಿವರಾಗಿ, ರಾಜ್ಯಪಾಲರುಗಳಾಗಿ, ರಾಷ್ಟ್ರಾಧ್ಯಕ್ಷೆಯಾಗಿ, ಐ.ಪಿ.ಎಸ್. ಮುಂತಾದ ಕ್ಷೇತ್ರಗಳಲ್ಲಿ ಕಾಣಿಸಿರುವುದು ತುಂಬಾ ಸಣ್ಣಪ್ರಮಾಣದಲ್ಲಿ. ಇಂದಿರಾಗಾಂದಿ ಯವರು ರಾಜಕೀಯ ಬರುವವರೆಗೂ ರಾಜಕೀಯ ಕ್ಷೇತ್ರದಲ್ಲಿ ಕಾಣಿಸಿಕೊಂಡವರು ಬೆರಳೆಣಿಕೆಯಷ್ಟು ಸಂಖ್ಯೆಯ ಮಹಿಳೆಯರು ಮಾತ್ರ.

ಪ್ರಪಂಚದಲ್ಲಿ ರಾಜಕೀಯ ಹೋರಾಟದ ವಿಚಾರಧಾರೆ ರೂಪುಗೊಳ್ಳುವ ಹಂತದಲ್ಲಿ ಮಹಿಳೆಯರು ಯಾವಾಗಲೂ ಹೋರಾಟದ ಮುಂಚೂಣಿಯಲ್ಲಿ ಇದ್ದಾರೆ. ಆದರೆ ಅಧಿಕಾರವನ್ನು ಹಂಚಿಕೊಳ್ಳುವ ರಾಜಕೀಯ ಹಂತದಲ್ಲಿ ಮಾತ್ರ ಅವರ ಅಸ್ತಿತ್ವವೇ ಕಾಣಿಸುವುದಿಲ್ಲ. ಇಂಡಿಯಾದ ರಾಜಕೀಯ ಇತಿಹಾಸದಲ್ಲೂ ಮಹಿಳೆಯರ ಸ್ಥಿತಿಯೂ ಇದೇ ಆಗಿದೆ. ರಾಜಕೀಯ ಹೋರಾಟಗಳಲ್ಲಿ ವಸಾಹತುಶಾಪಿ ವಿರುದ್ಧ ಕೂಲಿಗಾಗಿ, ಬೆಲೆ ಏರಿಕೆ ವಿರುದ್ಧ ಭೂಮಿಯ ಒಡೆತನಕ್ಕಾಗಿ ಮಹಿಳೆಯರು ಧರಣಿ ಕೂತಿದ್ದಾರೆ. ಜೈಲಿಗೂ ಹೋಗಿದ್ದಾರೆ. ಆದರ ಅವರಿಗೆ ನ್ಯಾಯ ದೊರಕಲಿಲ್ಲ. 1957 ರಿಂದಲೂ ಮೀಸಲಾತಿಯ ಬಗ್ಗೆ ಆಶಯಗಳಿದ್ದರೂ ಸಹ ಯಾವುದೇ ಪ್ರತಿಫಲ ದೊರಕಲಿಲ್ಲ. ಈ ಐವತ್ತು ದಶಕದಲ್ಲಿ ಮಹಿಳೆಯರು ರಾಜಕೀಯದ ಮುಖ್ಯವಾಹಿನಿಯಲ್ಲಿ ಒಂದು 'ರಾಜಕೀಯ ಶಕ್ತಿ'ಯಾಗುವಂತಹ ಪ್ರಾಮಾಣಿಕ ಪ್ರಯತ್ನಗಳನ್ನು ರಾಜಕೀಯ ಪಕ್ಷಗಳು ಮಾಡಿವೆಯೇ? ಇದಕ್ಕೆ ಉತ್ತರ ಇಲ್ಲ ಎಂಬುದು ಸ್ಪಷ್ಟವಾಗಿದೆ.

ಎಲ್ಲಾ ರಾಜಕೀಯ ಪಕ್ಷಗಳು ತಮ್ಮ ಚುನಾವಣಾ ಪ್ರಣಾಳಿಕೆಗಳಲ್ಲಿ ಮಹಿಳಾ ಮೀಸಲಾತಿಯನ್ನು ಬೆಳೆಸಿಕೊಳ್ಳುತ್ತವೆಯೇ ಹೊರತು ಕಾರ್ಯಗತಗೊಳಿಸುವುದಿಲ್ಲ.

ಮಹಿಳೆಯರನ್ನು ಪುರುಷರಿಗೆ ಸಮಾನರಾಗಿ ಅಲ್ಲದಿದ್ದರೂ ಗಣ್ಯ ರೀತಿಯಲ್ಲಿ ಇಂಡಿಯಾದ ಪ್ರಜಾಪ್ರಭುತ್ವದಲ್ಲಿ ಕಾಣಿಸಿಕೊಳ್ಳುವಂತೆ ಮಾಡುವ ಕ್ರಮ ಸ್ವಾಗತಾರ್ಹವಾದರೂ ಅನೇಕ ಪ್ರಶ್ನೆಗಳನ್ನು ನಾವು ಸೂಕ್ಷ್ಮವಾಗಿ ಅವಲೋಕಿಸಬೇಕಾಗುತ್ತದೆ. ಮಹಿಳಾ ಮೀಸಲಾತಿಯ ಬಗ್ಗೆ ಮಾತನಾಡುವ ಪಕ್ಷಗಳು ಅದರ ನಿಜವಾದ ಉದ್ದೇಶ ಈಡೇರುವಿಕೆಯಲ್ಲಿ ಬೇಕಾದ ಸರಿಯಾದ ನಿಲುವು/ಕಾರ್ಯಕ್ರಮಗಳನ್ನು ತಮ್ಮ ಪಕ್ಷಗಳಲ್ಲಿ ರೂಪಿಸಿಕೊಳ್ಳುತ್ತವೆಯೇ? ಎಂದರೆ ಮಹಿಳೆಯರನ್ನು ಸಾಮಾಜಿಕ, ರಾಜಕೀಯ ಚಟುವಟಿಕೆಗಳಲ್ಲಿ ತೊಡಗಿಸುವಂತಹ ಪ್ರಯತ್ನಗಳನ್ನು ಯಾವುದೇ ರಾಜಕೀಯ ಪಕ್ಷಗಳು ತಮ್ಮ ಉದ್ದೇಶ ಅಥವಾ ಗುರಿಯನ್ನಾಗಿ ಮಾಡಿಕೊಂಡಿಲ್ಲ.

'ಸಮಾನತೆಗೆ ನಡೆಯುತ್ತಿರುವ ಹೋರಾಟದ ಮಧ್ಯ ಮೀಸಲಾತಿಯ ಮಾತೇಕೆ?' ಎನ್ನುವ ಮಾತು ಕೆಲವು ಕಡೆಯಿಂದ ಕೇಳಿಬರುತ್ತಿದೆ. ಸಂವಿಧಾನ ದತ್ತವಾದ ಹಕ್ಕುಗಳು ಇಂದಿಗೂ ಔಪಚಾರಿಕ ಹಕ್ಕುಗಳಾಗಿಯೇ ಉಳಿದಿವೆ. ಎಲ್ಲಾ ಕ್ಷೇತ್ರದಲ್ಲಿಯೂ ಆಕೆ ಅವಕಾಶ ಹಾಗೂ ಮೀಸಲಾತಿಯ ಅವಶ್ಯಕತೆ ಇದೆ. ಈ ಹಿನ್ನೆಲೆಯಲ್ಲಿಯೇ 1957ರ ಬಲವಂತರಾಯ್ ಕಮಿಟಿ, 1975ರಲ್ಲಿ 'ಮಹಿಳೆಯರ ಸ್ಥಾನಮಾನಗಳ ಪರಿಶೀಲನೆಗೆ ರಚಿಸಿದ ಸಮಿತಿಯೂ ಕೂಡ ಮಹಿಳೆಯರಿಗೆ ನ್ಯಾಯವಾಗಿ ಸಿಗಬೇಕಾದ ಸ್ಥಾನ ಸಿಗದ ಬಗ್ಗೆ ಸ್ಪಷ್ಟವಾಗಿ ತಿಳಿಸಿತ್ತು. 1978ರಲ್ಲಿ ಅಶೋಕಮೆಹ್ತ ಕಮಿಟಿ ಪಂಚಾಯತ್ ವ್ಯವಸ್ಥೆಯನ್ನು ಕುರಿತು ತನ್ನ ವರದಿಯಲ್ಲಿ ಮಹಿಳೆಯರಿಗೆ ಪ್ರಾತಿನಿಧ್ಯ ನೀಡುವ ಕುರಿತು ಒತ್ತಾಯ ಮಾಡಿತು. 1983ರಲ್ಲಿ ಕರ್ನಾಟಕ ಸರ್ಕಾರ ಸ್ಥಾನಿಕ ಚುನಾವಣೆಗಳಲ್ಲಿ 25 ಪ್ರತಿಶತ ಮಹಿಳೆಯರಿಗಾಗಿ ಮೀಸಲಿಡುವ ಕಾಯ್ದೆಯನ್ನು ಮಾಡಿತು ಮತ್ತು ಅದನ್ನು 1987ರಲ್ಲಿ ಜಾರಿಗೆ ತಂದಿತು. ಇದು ಮಹಿಳೆಯರು ಹೆಚ್ಚಿನ ಸಂಖ್ಯೆಯಲ್ಲಿ ರಾಜಕೀಯ ಪ್ರಕ್ರಿಯೆಯಲ್ಲಿ ಪಾಲ್ಗೊಳ್ಳಲು ಅನುವು ಮಾಡಿಕೊಟ್ಟಿತು. 1988ರಲ್ಲಿ "ರಾಷ್ಟ್ರೀಯ ಮಹಿಳಾ ಅಭಿವೃದ್ಧಿ ಯೋಜನೆ" ಪಂಚಾಯತ್‌ನಿಂದ ಲೋಕಸಭೆಯವರೆಗೆ 1/3 ಭಾಗದಷ್ಟು ಮಹಿಳೆಯರಿಗೆ ಮೀಸಲಿಡಬೇಕೆಂಬ ಶಿಫಾರಸ್ಸು ಮಾಡಿತು. 1991ರಲ್ಲಿ ಪಂಚಾಯತ್ ರಾಜ್ ಕಾನೂನಿಗೆ ತಿದ್ದುಪಡಿ ಪಾರ್ಲಿಮೆಂಟಿನಲ್ಲಿ ಮಂಡನೆಯಾಯಿತು. ಎಲ್ಲ ಪಕ್ಷಗಳೂ ಒಪ್ಪಿದವು. ಹೀಗೆ ಮಹಿಳೆಯರ ಮೀಸಲಾತಿಗೆ ಎಲ್ಲೆಡೆ ಕೂಗುಗಳು ಕೇಳಿಬರುತ್ತಿವೆ.

ಮಹಿಳೆಯರು ರಾಜಕೀಯ ಕ್ಷೇತ್ರವನ್ನು ಹೆಚ್ಚಿನ ಸಂಖ್ಯೆಯಲ್ಲಿ ಪ್ರವೇಶಿಸುವುದರಿಂದ ಅವರಿಗೆ ನ್ಯಾಯ ಸಲ್ಲುವುದು ಮಾತ್ರವಲ್ಲ ರಾಜಕೀಯ ಕ್ಷೇತ್ರದ ಬಣ್ಣವೂ ಬದಲಾಗುತ್ತದೆ. 'ರಾಜಕಾರಣ'ದ ಈಗಿನ ಕೆಟ್ಟ ವ್ಯಾಖ್ಯಾನವೂ ಬದಲಾಗುತ್ತದೆ. ಹಾಗೂ ಇತ್ತೀಚಿನ ದಿನಗಳಲ್ಲಿ ಹೆಚ್ಚುತ್ತಿರುವ ರಾಜಕೀಯ ಅಪರಾಧೀಕರಣದ ಪ್ರಮಾಣವೂ ಕಡಿಮೆಯಾಗುತ್ತದೆ. ರಾಜ್ಯಶಾಸನ ಸಭೆ ಹಾಗೂ ಲೋಕಸಭೆಯಲ್ಲದೇ ರಾಜ್ಯಸಭೆ ಹಾಗೂ ವಿಧಾನ ಪರಿಷತ್ತುಗಳಲ್ಲೂ ಮಹಿಳೆಯರಿಗೆ ಕನಿಷ್ಟ 33% ಮೀಸಲಾತಿ ಕೊಡುವುದರ ಅವಶ್ಯಕತೆ ಇದೆ.

ಪ್ರಜಾಸತ್ತಾತ್ಮಕ ಸಂಸ್ಥೆಗಳಲ್ಲಿ ಜಗತ್ತಿನಾದ್ಯಂತ ಮಹಿಳಾ ಪ್ರಾತಿನಿಧ್ಯವು ಬಹಳ ಕಡಿಮೆ ಇದೆ. ಹೀಗಾಗಿ ರಾಜಕೀಯ ಕ್ರಿಯೆಗಳಲ್ಲಿನ ಲಿಂಗ ಪೂರ್ವಾಗ್ರಹಗಳನ್ನು ನಿವಾರಿಸಲು ಸಂಸತ್ತು ಶಾಸನ ಸಭೆಗಳು ಮತ್ತು ಸ್ಥಳೀಯ ಸ್ವಯಂ ಆಡಳಿತ ಸರ್ಕಾರಗಳಲ್ಲಿ ಮಹಿಳಾ ಪ್ರಾತಿನಿಧ್ಯದ ಅಗತ್ಯವನ್ನು ಜಗತ್ತಿನಾದ್ಯಂತ ಮನಗಾಣಲಾಗಿದೆ.

ಸಾರ್ವತ್ರಿಕ ಚುನಾವಣೆಗಳಲ್ಲಿ ನೇರವಾಗಿ ಮಹಿಳೆಯರು ಪುರುಷರ ವಿರುದ್ಧ ಸ್ಪರ್ಧಿಸಿ ಗೆಲ್ಲುವುದು ಕಷ್ಟಕರ. ಆದ್ದರಿಂದ ಮಹಿಳೆಯರಿಗೆ ಸಾಂಸದಿಕ ಸಂಸ್ಥೆಗಳಲ್ಲಿ ರಾಜಕೀಯ ಮೀಸಲಾತಿ ನೀಡಬೇಕೆಂಬ ವಾದ, ವಿಶೇಷವಾಗಿ ವಿಕಾಸಶೀಲ ದೇಶಗಳಲ್ಲಿ ಹುಟ್ಟಿಕೊಂಡಿದೆ. 1993 ಮತ್ತು 1994ರಲ್ಲಿ ಭಾರತೀಯ ಸಂವಿಧಾನಕ್ಕೆ ತಿದ್ದುಪಡಿಗಳನ್ನು ತಂದು ಗ್ರಾಮೀಣ ಮತ್ತು ನಗರ ಸ್ಥಳೀಯ ಸ್ವಯಂ ಆಡಳಿತ ಸರ್ಕಾರಗಳಲ್ಲಿ ಶೇ. 33ರಷ್ಟು ಸ್ಥಾನಗಳಲ್ಲಿ ಮಹಿಳಾ ಮೀಸಲಾತಿ ನೀಡಲಾಯಿತು. ಜೊತೆಗೆ ಸ್ಥಳೀಯ ಸರ್ಕಾರಗಳಿಗೆ ಪ್ರತಿ ಐದು ವರ್ಷಗಳಿಗೊಮ್ಮೆ ಚುನಾವಣೆ ನಡೆಸುವುದು, ಅನುದಾನ ನಿರ್ಧರಿಸುವುದು, ವಿಕೇಂದ್ರಿಕರಣದನ್ವಯ ಹೆಚ್ಚು ಅಧಿಕಾರ ನೀಡುವುದನ್ನು ಕೂಡ ಮೇಲ್ಕಂಡ ಸಂವಿಧಾನಿಕ ತಿದ್ದುಪಡಿಗಳು ಒಳಗೊಂಡಿವೆ. 1994 ರಿಂದಲೂ ಈ ವ್ಯವಸ್ಥೆ ಚೆನ್ನಾಗಿ ಕಾರ್ಯನಿರ್ವಹಿಸುತ್ತಿದ್ದು, ಮಹಿಳೆಯರ ರಾಜಕೀಯ ಪ್ರಾತಿನಿಧ್ಯವು ಉತ್ತಮಗೊಳ್ಳುತ್ತಿದೆ. ಈ ಮಾದರಿಯಲ್ಲೇ ಸಂಸತ್ತು ಮತ್ತು ರಾಜ್ಯಶಾಸನ ಸಭೆಗಳಲ್ಲೂ ಶೇ. 33ರಷ್ಟು ಸ್ಥಾನಗಳಲ್ಲಿ ಮಹಿಳಾ ಮೀಸಲಾತಿ ನೀಡಬೇಕೆಂಬ ಬೇಡಿಕೆಯಿದೆ. ಈ ಸಂಬಂಧವಾಗಿ ಕೆಲವು ವಿಧೇಯಕವು ಹಲವು ವರ್ಷಗಳಿಂದಲೂ ಸಂಸತ್ತಿನ ಮುಂದಿದೆ.

ಶಾಸನಸಭೆ ಹಾಗೂ ಲೋಕಸಭೆ ಶಾಸನ ರಚಿಸಿರುವ ಸದನಗಳಾದ್ದರಿಂದ ಹಾಗೂ ಇಡೀ ದೇಶಕ್ಕೆ, ರಾಜ್ಯಕ್ಕೆ ಕಾರ್ಯ ನೀತಿ ರೂಪಿಸುವ ಸದನಗಳಾದ್ದರಿಂದ ಸಮರ್ಥ ಮಹಿಳೆಯರು ಈ ಸ್ಥಾನಗಳನ್ನು ತುಂಬುವ ಅವಶ್ಯಕತೆ ಇದೆ. ಮೀಸಲಾತಿ ಮಹಿಳೆಯರಿಗೆ ಕೊಡುವ ಅವಕಾಶ ಮಾತ್ರವಾಗದೇ ಮಹಿಳಾ ನಾಯಕತ್ವ ರೂಪಿಸುವ ಜಾಗಗಳೂ ಆಗಬೇಕು. ಅದಕ್ಕಾಗಿ ವಿದ್ಯಾವಂತ ಮಹಿಳೆಯರು ಹೆಚ್ಚಿನ ಸಂಖ್ಯೆಯಲ್ಲಿ ರಾಜಕೀಯ ಕ್ಷೇತ್ರವನ್ನು ಪ್ರವೇಶಿಸಬೇಕು. ಆಗ ಆಕೆಗೆ ಸಂವಿಧಾನದ ಹಕ್ಕುಗಳನ್ನು ಒದಗಿಸುವಲ್ಲಿ ಸಮರ್ಥನೀಯ ಕಾರ್ಯವನ್ನು ಕೈಗೊಳ್ಳಬಹುದು. ರಾಜ್ಯದ, ದೇಶದ ಆಗುಹೋಗುಗಳಲ್ಲಿ ಹೆಚ್ಚಿನ ಆಸಕ್ತಿ ವಹಿಸಬೇಕು. ಈ ರೀತಿ ಸ್ಥಳೀಯ ಸಂಸ್ಥೆಗಳಲ್ಲಿ ಹಾಗೂ ಸರ್ಕಾರಗಳಲ್ಲಿ ಮಹಿಳೆಯರಿಗೆ ಮೀಸಲಾತಿಯನ್ನು ನೀಡುವುದು ಮಹಿಳಾ ರಾಜಕಾರಣಿಗಳಿಗೆ ಉತ್ತಮ ತಳಪಾಯವಾಗುತ್ತದೆ. ಇದಕ್ಕೆ ಸಂವಿಧಾನಾತ್ಮಕ ಒತ್ತಡವಿಲ್ಲದಿದ್ದರೆ ಪುರುಷರು ಮಹಿಳೆಯರಿಗೆ ಸ್ಥಳಾವಕಾಶ ಮಾಡಿಕೊಡುವುದಿಲ್ಲ.

ಈ ಮೀಸಲಾತಿಯ ವಿಚಾರದಲ್ಲೂ ಮಹಿಳಾಪರ, ವಿರೋಧಗಳನ್ನು ಕಾಣಬಹುದು.

1) 33% ಮೀಸಲಾತಿಯಿಂದಾಗಿ ರಾಜಕೀಯ ಪಕ್ಷಗಳು ಮಹಿಳೆಯರಿಗೆ ಪಕ್ಷದಿಂದ ಟಿಕೇಟ್ ಕೊಡಬೇಕಾಗುತ್ತದೆ. ಹಾಗಾಗಿ ರಾಜಕೀಯ ಪ್ರವೇಶ ಮಹಿಳೆಯರಿಗೆ ಅನಿವಾರ್ಯವಾಗುತ್ತದೆ. ಆದರೆ ಈಗಿರುವ ಸ್ಥಿತಿಯಲ್ಲಿ ರಾಜಕೀಯ ಧುರೀಣರ ಹೆಂಡತಿ/ಮಗಳು/ಸೊಸೆ ಈ ರೀತಿಯ ಮೀಸಲಾತಿಯನ್ನು ಕಬಳಿಸಿಬಿಡುತ್ತಾರೆ. ಆಗ ಮಹಿಳೆಯರು ರಾಜಕೀಯ ನಾಯಕಿಯಾಗುವುದಕ್ಕಿಂತ ಅವರ ಹಿಂದಿರುವ ಗಂಡಸರೇ ರಾಜಕೀಯ ಸೂತ್ರಧಾರಿಗಳಾಗಿಬಿಡುತ್ತಾರೆ.

2) ಇಂದು ಸಾಮಾನ್ಯ ಚುನಾವಣೆಯಲ್ಲಿ ಸ್ಪರ್ಧಿಸಲು ಮಹಿಳೆಯರಿಗೆ ಸಾಧ್ಯವೇ ಆಗದಂತಹ ರಾಜಕೀಯ ಸ್ಥಿತಿ ನಮ್ಮಲ್ಲಿರುವುದರಿಂದ ಈ ಮೀಸಲಾತಿ ಬಹುಮಂದಿ ಮಹಿಳೆಯರು ರಾಜಕಾರಣಕ್ಕೆ ಬರುಲು ಸಾಧ್ಯವಾಗುತ್ತದೆ ಎಂಬುದೊಂದು ವಾದವಾದರೆ ಹೆಂಗಸರ ವಿರುದ್ಧ ಹೆಂಗಸರೇ ಸ್ಪರ್ಧಿಸುವುದರಿಂದ ಸಾಂಪ್ರದಾಯಿಕವಾಗಿರುವ 'ಹೆಂಗಸರಿಗೆ ಹೆಂಗಸರೇ ವಿರುದ್ಧ' ಎನ್ನುವಂತಹ ಅಭಿಪ್ರಾಯವನ್ನು ಇದು ಬಲಪಡಿಸುತ್ತದೆ ಎನ್ನುವ ಅಭಿಪ್ರಾಯವೂ ವ್ಯಕ್ತಗೊಂಡಿದೆ.

3) ಮಹಿಳೆಯರು ಅಧಿಕಾರಕ್ಕೆ ಬಂದರೆ ಮಹಿಳಾ ಪ್ರಶ್ನೆಗಳು ಹೆಚ್ಚು ಹೆಚ್ಚು ಪ್ರಾಮುಖ್ಯತೆ ಗಳಿಸುತ್ತವೆ ಎನ್ನುವುದು ಮೀಸಲಾತಿಯ ಪರವಾಗಿರುವ ವಾದವಾದರೆ ಆಯ್ಕೆಯಾದ ಮಹಿಳೆಯರು ಮಹಿಳೆಯರ ಪರವಾಗಿಯೇ ಇರುತ್ತಾರೆ ಎಂಬುದನ್ನು ನಿರೀಕ್ಷಿಸುದಕ್ಕಾಗುವುದಿಲ್ಲ. ಇರುವ ವ್ಯವಸ್ಥೆಯಲ್ಲಿ ಪುರುಷರ ಮೌಲ್ಯಗಳನ್ನೇ ಅಳವಡಿಸಿಕೊಂಡು, ಚುನಾಯಿತಗೊಂಡ ಮಹಿಳೆಯರು ಮಹಿಳೆಯರ ಪ್ರಶ್ನೆಗಳಿಗೆ ಸ್ಪಂದಿಸದೇ ಹೋಗಬಹುದು ಎನ್ನುವ ವಾದವೂ ಇದೆ.

4) ಮೀಸಲಾತಿಗೆ ಇರುವ ಮುಖ್ಯವಾದ ವಿರೋಧವೆಂದರೆ ಹಿಂದುಳಿದ ವರ್ಗ, ಪಂಗಡದ ಮಹಿಳೆಯರಿಗೂ 33% ಮೀಸಲಾತಿ ನೀಡಬೇಕೆಂಬುದು, ಪರಿಶಿಷ್ಟ ಜಾತಿ, ವರ್ಗದವರಿಗೆ ಮೀಸಲಾತಿ ಇರುವುದರಿಂದ 33% ಮೀಸಲಾತಿಯಲ್ಲಿ ಅವರಿಗೆ ಮೀಸಲಾತಿ ಸಿಗುತ್ತದೆ. ಹಿಂದುಳಿದ ವರ್ಗ/ಪಂಗಡಗಳಿಗೆ ಮೀಸಲಾತಿ ನೀಡಬೇಕು ಎನ್ನುವ ಲಾಭಿಯು ಮಹಿಳೆಯರ 33% ಮೀಸಲಾತಿಯನ್ನು ತೀವ್ರವಾಗಿ ವಿರೋಧಿಸುತ್ತದೆ. ಆದರೆ ಹಿಂದುಳಿದ ವರ್ಗ/ಪಂಗಡಗಳಿಗೆ ಸಾಮಾನ್ಯ ಮೀಸಲಾತಿ ಸಿಕ್ಕಾಗ 33% ಮಹಿಳಾ ಮೀಸಲಾತಿಯಲ್ಲಿಯೂ ಆ ವರ್ಗದ ಮಹಿಳೆಯರು ಮೀಸಲಾತಿ ಪಡೆಯುತ್ತಾರೆ. ಹಾಗಾಗಿ ಮಹಿಳೆಯರ ಮೀಸಲಾತಿಗೆ ಧಕ್ಕೆ ತರಲು ಅದನ್ನು ಜಾರಿಗೆ ಬರದಂತೆ ಮಾಡಲು ಹಿಂದುಳಿದ ವರ್ಗ/ಪಂಗಡದ ಮೀಸಲಾತಿಯನ್ನು ನೆಪವಾಗಿ ಬಳಸಿಕೊಳ್ಳಲಾಗುತ್ತಿದೆ ಎಂಬ ಆರೋಪವನ್ನು ಮೀಸಲಾತಿ ಪರವಾಗಿರುವವರು ಮಾಡುತ್ತಾರೆ.

ಈ ರೀತಿ ರಾಜ್ಯದ ವಿರೋಧಾ ಭಾಸಗಳನ್ನು ಹಾಗೂ ಸಾಂಕೇತಿಕ ಮೀಸಲಾತಿಯಿಂದ ಮಹಿಳಾ ಚಳುವಳಿಯನ್ನು ಅಶಕ್ತಗೊಳಿಸುವ, ಮೀಸಲಾತಿಯನ್ನು ಕಬಳಿಸಿಬಿಡುವ ಮೀಸಲಾತಿಯಂತಹ ಪ್ರಯತ್ನಗಳು ಪ್ರಶ್ನಾರ್ಹವಾದರೂ, ಇರುವ ಪ್ರಸ್ತುತ ವ್ಯವಸ್ಥೆಯಲ್ಲಿ ಮೀಸಲಾತಿ ಬಹುತೇಕ ಮಹಿಳೆಯರ ರಾಜಕೀಯ ಪ್ರವೇಶಕ್ಕೆ ಅನುವುಮಾಡಿಕೊಡುತ್ತಿರುವುದು ಸ್ವಾಗತಾರ್ಹ. ಈ ರೀತಿಯಿಂದಲಾದರೂ ಮಹಿಳಾ ಹಕ್ಕುಗಳಿಗೆ ತನ್ನದೇ ಆದ ನೆಲೆಯನ್ನು ಕಂಡುಕೊಂಡು ಅವುಗಳ ಸದ್ಬಳಕೆಯನ್ನು ಹೊಂದಲು ಸಾಧ್ಯವಾಗುತ್ತದೆ.

## 1. ಮುಸ್ಲಿಂರಲ್ಲಿ ಮಹಿಳೆಯರ ಆಸ್ತಿ ಹಕ್ಕುಗಳು

ಭಾರತದ ರಾಷ್ಟ್ರ ವ್ಯಾಪ್ತಿಯಲ್ಲಿ ಯಾವುದೇ ವ್ಯಕ್ತಿ ಕಾನೂನಿನ ಸಮಾನ ಸಂರಕ್ಷಣೆಯನ್ನು ನಿರಾಕರಿಸತಕ್ಕದ್ದಲ್ಲ. ಅಂದರೆ ಕಾನೂನಿನ ಮುಂದೆ ಪ್ರತಿಯೊಬ್ಬ ವ್ಯಕ್ತಿಯು ಸಮಾನನು ಮತ್ತು ಕಾನೂನಿನ ಸಮಾನ ಸಂರಕ್ಷಣೆಗೆ

ಹಕ್ಕುಳ್ಳುವನಾಗಿರುತ್ತಾನೆ. ಧರ್ಮ, ಜನಾಂಗ, ಜಾತಿ, ಲಿಂಗ ಆಧಾರದ ಮೇಲೆ ಪ್ರತಿಯೊಬ್ಬ ನಾಗರೀಕನು ತನ್ನದೇ ಆದ ವ್ಯಾಪ್ತಿಯಲ್ಲಿ ಮೂಲಭೂತ ಹಕ್ಕನ್ನು ಹೊಂದಬಹುದು. ನಮ್ಮ ಕಾನೂನುಗಳು ಆಸ್ತಿಯನ್ನು ಹೊಂದುವ ಹಕ್ಕನ್ನು ನೀಡಿವೆ. ಪುರುಷರು ಹಾಗೂ ಮಹಿಳೆಯರಿಬ್ಬರಿಗೂ ಆಸ್ತಿಯನ್ನು ಹೊಂದುವ ಹಕ್ಕಿದೆ. ಈ ಬಗ್ಗೆ ಸರ್ಕಾರವು ಕಾನೂನುಗಳನ್ನು ಮಾಡಿದ್ದು, ಅದರಲ್ಲೂ ಮುಸ್ಲಿಂ ಮಹಿಳೆಯರಿಗೂ ಸಹ ಆ ಆಸ್ತಿಯಲ್ಲಿ ಹಕ್ಕುಂಟು. ಅವುಗಳೆಂದರೆ,

1. ಪ್ರತಿಯೊಬ್ಬ ಮಹಿಳೆಯು ತನ್ನ ಸ್ವಂತ ಹೆಸರಿನಲ್ಲಿ ಆಸ್ತಿಯನ್ನು ಸಂಪಾದಿಸಲು ಹಾಗೂ ಹೊಂದಿರಲು ಹಕ್ಕುಳ್ಳವಳಾಗಿದ್ದಾಳೆ.

2. ಆಕೆ ತನ್ನ ಆಸ್ತಿಯನ್ನು ತನಗೆ ಇಷ್ಟ ಬಂದಂತೆ ಬಳಸಬಹುದು.

3. ಮಹಿಳೆ ತನ್ನ ಗಳಿಕೆಯನ್ನು ತಾನೇ ತೆಗೆದುಕೊಳ್ಳಲಿಕ್ಕೆ, ಇಟ್ಟುಕೊಳ್ಳಲಿಕ್ಕೆ ಹಾಗೂ ಬೇಕೆನಿಸಿದ ರೀತಿಯಲ್ಲಿ ಖರ್ಚು ಮಾಡಲಿಕ್ಕೆ ಹಕ್ಕುಳ್ಳವಳಾಗಿರುತ್ತಾಳೆ.

4. ಪುರುಷರಂತೆಯೇ ಆಸ್ತಿಯನ್ನು ಕೊಳ್ಳಲು ಹಾಗೂ ಮಾರಾಟ ಮಾಡಲು ಮಹಿಳೆಯೂ ಹಕ್ಕುಳ್ಳವಳಾಗಿರುತ್ತಾಳೆ.

ಮಹಿಳೆಯರಿಗೆ ತಮ್ಮ ತಂದೆ ತಾಯಿ ಅಥವಾ ಇತರ ಸಂಬಂಧಿಗಳ ಆಸ್ತಿಯಲ್ಲಿಯೂ ಪಾಲು ಸಿಗುತ್ತದೆ. ಅವರ ಪಾಲು ಅವರ ಜನಾಂಗದ ವೈಯಕ್ತಿಕ ಕಾನೂನುಗಳು ಅಂದರೆ ಅವರ ಧರ್ಮದ ಅನುಸಾರವಾಗಿ ರೂಪಿತವಾಗಿರುವ ಕಾನೂನುಗಳ ಮೇಲೆ ಅವಲಂಬಿಸಿರುತ್ತವೆ.

ಭಾರತದಲ್ಲಿ ಮುಸ್ಲಿಂ ಕಾನೂನು ಮುಸ್ಲಿಮರಿಗೆ ಆಸ್ತಿಯ ಉತ್ತರಾಧಿಕಾರ ಅಥವಾ ವಾರಸುದಾರಿಕೆಯಲ್ಲಿ ಮಹಿಳೆಗೆ ಯಾವ ರೀತಿ ಈ ಆಸ್ತಿ ಹಕ್ಕುಂಟು ಎಂದರೆ ಅವರಲ್ಲಿ ಸುನ್ನಿ ಮತ್ತು ಶಿಯಾ ಎಂಬ ಗುಂಪುಗಳಿವೆ. ಅದರಲ್ಲಿ ಸುನ್ನಿ ಪಂಗಡದಲ್ಲಿ, ಹನಾಫಿ ನಿಯಮಗಳು, ಮೃತ ವ್ಯಕ್ತಿಗೆ ಪುರುಷನ ಮೂಲಕ ಸಂಬಂಧಿಗಳಾದವರನ್ನು ಮಾತ್ರ ಉತ್ತರಾಧಿಕಾರಿಗಳೆಂದು ಲೆಕ್ಕಕ್ಕೆ ತೆಗೆದುಕೊಳ್ಳುತ್ತವೆ. ಉದಾ.: ಮಗನ ಹೆಣ್ಣು ಮಕ್ಕಳು, ಮಗನ ಮಗ, ತಂದೆಯ ತಾಯಿ.

ಶಿಯಾ ಪಂಥ ಮೃತ ವ್ಯಕ್ತಿಯೊಂದಿಗೆ ಮಹಿಳೆಯರ ಮೂಲಕ ಸಂಬಂಧ ಹೊಂದಿರುವಂಥವರನ್ನು ಸಹ ವಾರಸುದಾರರಾಗಿ ಪರಿಗಣಿಸುತ್ತದೆ. ಉದಾ.: ಮಗಳ ಮಗ, ಮಗಳ ಮಗಳು. ಇದು ಮುಖ್ಯ ವ್ಯತ್ಯಾಸ. ಉಳಿದಂತೆ ಎರಡು ಪಂಗಡಗಳು ಒಂದೇ ರೀತಿ ಕಾನೂನಿನ ಮೂಲಕ ಆಸ್ತಿಯ ಹಕ್ಕನ್ನು ಹೊಂದಬಹುದು. ವಾರಸುದಾರಿಕೆ, ಜೀವನಾಂಶ ಮತ್ತು ಮಹರ್‌ನಲ್ಲಿ (ವರದಕ್ಷಿಣೆ) ಒಬ್ಬ ಮಹಿಳೆಗೆ ಕೆಲವು ಹಕ್ಕುಗಳಿವೆ. ಆಕೆ ಮಗಳಾಗಿ, ವಿಧವೆಯಾಗಿ, ಅಜ್ಜಿಯಾಗಿ, ತಾಯಿಯಾಗಿ, ಮಗನ ಮಗಳಾಗಿ ವಾರಸುದಾರಿಕೆಗೆ ಅರ್ಹಳಾಗುತ್ತಾಳೆ.

**ವಿಧವೆ :**

ವಿಧವೆ ತನ್ನ ಗಂಡನ ಆಸ್ತಿಯಲ್ಲಿ ಮಗಳಿದ್ದಾಗ ಗಂಡನ ಆಸ್ತಿಯ 1/8 ಪಾಲನ್ನು ಪಡೆಯುತ್ತಾಳೆ. ಹಾಗೂ ಮಕ್ಕಳಿಲ್ಲದಿದ್ದಾಗ 1/4 ಪಾಲು ದೊರೆಯುತ್ತದೆ. ಇಬ್ಬರಿಗಿಂತ ಹೆಚ್ಚು ವಿಧವೆಯರಿದ್ದರೆ ಸಿಗುವ ಆಸ್ತಿಯೆಂದರೆ ಮಕ್ಕಳಿದ್ದಾಗ

ಇಬ್ಬರು ಅಥವಾ ಹೆಚ್ಚು ವಿಧವೆಯರು ಒಟ್ಟಾಗಿ ಗಂಡನ ಆಸ್ತಿಯ 1/8 ಪಾಲನ್ನು ಪಡೆಯುತ್ತಾರೆ. ಮಕ್ಕಳಿಲ್ಲದಿದ್ದಾಗ ಒಟ್ಟಾಗಿ 1/4 ಪಾಲು ಪಡೆಯುತ್ತಾರೆ.

**ಮಗಳು :**

ತಂದೆಯ ಆಸ್ತಿಯಲ್ಲಿ ಮಗಳು ಆಕೆಯ ಸಹೋದರ ಇಲ್ಲದಿದ್ದರೆ ಅರ್ಧಪಾಲು ಬರುತ್ತದೆ. ಆಕೆಗೆ ಸಹೋದರ ಇದ್ದರೆ ಸಹೋದರನಿಗೆ ಬರುವುದರಲ್ಲಿ ಅರ್ಧಪಾಲು ಬರುತ್ತದೆ. ಇಲ್ಲಿಯೂ ಪುರುಷರು ಮಹಿಳೆಯ ಎರಡು ಪಟ್ಟಿ ಪಾಲನ್ನು ಹೊಂದುತ್ತಾನೆ.

**ತಾಯಿ :**

ತನ್ನ ಮಗನ ಆಸ್ತಿಯಲ್ಲಿ ತಾಯಿ ಹಕ್ಕೆಂದರೆ ಮೃತನ ಮಕ್ಕಳಿಲ್ಲದಿದ್ದಾಗ ಆಕೆ 1/3 ಪಾಲು ಆಸ್ತಿಯನ್ನು ಹೊಂದಬಹುದು. ಮಕ್ಕಳಿದ್ದರೆ 1/6ರಷ್ಟು ಪಡೆಯಬಹುದು.

**ಅಜ್ಜಿ :**

ಮೊಮ್ಮಗನ ಆಸ್ತಿಯಲ್ಲಿ ತಾಯಿ ಅಥವಾ ಅಜ್ಜಿ ಇಲ್ಲದಿದ್ದಾಗ ತಾಯಿ ಕಡೆಯ ಅಜ್ಜಿಯು ಒಟ್ಟು ಆಸ್ತಿಯ 1:6 ಭಾಗವನ್ನು ಪಡೆಯುತ್ತಾಳೆ. ತಂದೆ ಅಥವಾ ಅಜ್ಜ ಇಲ್ಲದಿದ್ದಾಗ ಮಾತ್ರ ತಂದೆ ಕಡೆಯ ಅಜ್ಜಿಯ ಆಸ್ತಿಯಲ್ಲಿ ಪಾಲನ್ನು ಪಡೆಯುತ್ತಾಳೆ.

**ವರದಕ್ಷಿಣೆ ಅಥವಾ ಮಹರ್‌ಗೆ ಸಂಬಂಧಿಸಿದಂತೆ ಆಕೆಗೆ ಹಕ್ಕುಂಟು :**

ವಿವಾಹದ ಸಂದರ್ಭದಲ್ಲಿ ಗಂಡನಿಂದ ಹೆಂಡತಿ ಪಡೆಯಲು ಹಕ್ಕುಳ್ಳ ಒಂದು ಹಣದ ಮೊತ್ತ ಅಥವಾ ಯಾವುದೇ ಆಸ್ತಿಯನ್ನು ಮಹರ್ ಎನ್ನುತ್ತಾರೆ. ಅದು ವಿವಾಹದ ಒಂದು ಅವಿಭಾಜ್ಯ ಅಂಗ. ಇದನ್ನು ವಿವಾಹದ ಮೊದಲು ಅಥವಾ ವಿವಾಹದ ಸಮಯದಲ್ಲಿ ನಿಗಧಿಪಡಿಸಬಹುದು. ವಿವಾಹದ ನಂತರ ಮಹರ್‌ನ್ನು ಹೆಚ್ಚಿಸಬಹುದು ಅಥವಾ ಬಿಟ್ಟುಕೊಡಬಹುದು. ಇದರಲ್ಲ 2 ರೀತಿಯ ಮಹರ್‌ಗಳಿವೆ.

(1) **ತ್ವರಿತ ಮಹರ್** : ವಿವಾಹವಾದ ಕೂಡಲೇ ನೀಡಲಾಗುವ ಹಣ ಪತ್ನಿಯು ವಿವಾಹವಾದ ಸಮಯದಲ್ಲಿ ಅಥವಾ ವಿವಾಹದ ಅವಧಿಯಲ್ಲಿ ಯಾವ ವೇಳೆಯಲ್ಲಾದರೂ ಅದನ್ನು ಕೇಳಬಹುದು.

(2) **ಮುಂದೂಡಲಾದ ಮಹರ್** : ಆಕೆಯ ಗಂಡನ ಸಾಲಿನಿಂದ ಅಥವಾ ವಿವಾಹದ ವಿಚ್ಛೇದನದ ಮೂಲಕ ಆಕೆಗೆ ಸಿಕ್ಕಲಿರುವ ಹಣ. ಇದಕ್ಕೆ ಕಾನೂನಿನ ಯಾವುದೇ ಗರಿಷ್ಠ ಮಿತಿಯನ್ನು ನಿಗಧಿಪಡಿಸಿಲ್ಲ. ಗಂಡ ತನಗೆ ಇಷ್ಟ ಬಂದಷ್ಟು ಹಣವನ್ನು ಹೆಂಡತಿಗೆ ನೀಡಬಹುದು. ಆದರೆ ಸುನ್ನಿ ಕಾನೂನಿನ ಪ್ರಕಾರ ಗಂಡ 10 ದಿನಾರ್‌ಗಿಂತ ಕಡಿಮೆ ಕೊಡುವಂತಿಲ್ಲ. ಒಂದು ವೇಳೆ ಗಂಡ ಮಹರ್ ನೀಡದಿದ್ದರೆ ಆಕೆ ಅದಕ್ಕಾಗಿ ನ್ಯಾಯಾಲಯಕ್ಕೆ ಹೋಗಬಹುದು. ಆಕೆಯ ಮರಣದ ನಂತರವೂ ಸಹ ಆಕೆಯ ಮಹರ್ ನೀಡದಿದ್ದರೆ ಆಕೆಯ ವಾರಸುದಾರರು

ಅದಕ್ಕಾಗಿ ನ್ಯಾಯಾಲಯಕ್ಕೆ ಹೋಗಬಹುದು. ಪತಿಯೇ ಮೃತನಾದರೆ ಆಕೆಯ ಮಹರ್ ಅನ್ನು ಪತಿಯ ಆಸ್ತಿಯಿಂದ ಪಡೆಯಬೇಕು. ವಿಧವೆ ಅಥವಾ ವಿವಾಹ ವಿಚ್ಛೇದಿತಳು ಪತಿಯ ಆಸ್ತಿಯನ್ನು ಸ್ವಾಧೀನಕ್ಕೆ ತೆಗೆದುಕೊಂಡು ಅವಳ ಮಹರ್ ಸಂದಾಯವಾಗುವವರೆಗೆ ತನ್ನ ಬಳಿ ಇಟ್ಟುಕೊಳ್ಳಬಹುದು. ಇದನ್ನು ಪ್ರತಿಧಾರಣ ಅಧಿಕಾರ ಎಂಬುದಾಗಿ ಕರೆಯಲಾಗುತ್ತದೆ. ಈ ರೀತಿ ಪತಿಯ ಆಸ್ತಿಯ ಸ್ವಾಧೀನತೆಯನ್ನು ಪಡೆದ ವಿಧವೆಯು ಕೆಲವು ಹಕ್ಕುಗಳಿಗೆ ಒಳಗಾಗುತ್ತಾಳೆ. ಅವುಗಳೆಂದರೆ

(ಅ) ಆಕೆಯು ಎಸ್ಟೇಟಿನ ಎಲ್ಲಾ ಆದಾಯ ಮತ್ತು ಲಾಭಗಳ ಪೂರ್ಣ ಲೆಕ್ಕಪತ್ರಗಳನ್ನು ನೀಡಬೇಕು.

(ಆ) ಆಕೆಯು ಆಸ್ತಿಯನ್ನು ಮಾರುವಂತಿಲ್ಲ ಅಥವಾ ದಾನ ಮಾಡುವಂತಿಲ್ಲ.

(ಇ) ಮಹರ್ ಸಾಲದ ವಸೂಲಿಗಾಗಿ ಆಕೆಯು ದಾವೆ ಹೂಡಬಹುದು.

(ಈ) ಆಕೆಯು ಆಸ್ತಿಯ ಬಾಡಿಗೆಗಳು ಮತ್ತು ಲಾಭಗಳಿಂದ ತನ್ನ ಮಹರ್ ಸಾಲವನ್ನು ತೀರಿಸಿಕೊಳ್ಳಬಹುದು.

ಮಹರ್ ನೀಡದಿದ್ದಾಗಲೂ ಸಹ ಆಕೆಗೆ ಕೆಲವು ಹಕ್ಕುಗಳಿವೆ.

(1) ತ್ವರಿತ ಮಹರ್ ನೀಡದಿದ್ದಾಗ ಹೆಂಡತಿಯು ಗಂಡನಿಗೆ ವೈವಾಹಿಕ ಹಕ್ಕುಗಳನ್ನು ನಿರಾಕರಿಸಬಹುದು.

(2) ತ್ವರಿತ ಮಹರ್ ನೀಡದ ಕಾರಣದಿಂದಾಗಿ ಪತ್ನಿಯು ತನ್ನ ಪತಿಯಿಂದ ಪ್ರತ್ಯೇಕವಾಗಿ ವಾಸಿಸುತ್ತಿದ್ದಾಗ ಆಕೆಯನ್ನು ಪೋಷಿಸಲು ಆತ ಬದ್ಧನಾಗಿರುತ್ತಾನೆ.

**2. ಜೀವನಾಂಶ ಪಡೆಯುವ ಹಕ್ಕು :**

ಜೀವನಾಂಶ ಅಥವಾ ನಫಕಾವನ್ನು ಗಂಡನು ತನ್ನ ಹೆಂಡತಿಗೆ, ಮಕ್ಕಳಿಗೆ ಆಹಾರ ಬಟ್ಟೆ ಹಾಗೂ ವಸತಿಗೆ ಕೊಡವ ಹಣ ಇದು ಹೆಂಡತಿಯನ್ನು ಪೋಷಿಸುವುದು ಗಂಡನ ಕಾನೂನುಬದ್ಧ ಕರ್ತವ್ಯ. ಒಂದು ವೇಳೆ ಪೋಷಿಸದಿದ್ದರೆ ದಂಡ ಪ್ರಕ್ರಿಯೆ ಸಂಹಿತೆಯ 125ನೇ ಪ್ರಕರಣಧ ಮೇರೆಗೆ ಜೀವನಾಂಶಕ್ಕೆ ಅರ್ಜಿ ಸಲ್ಲಿಸುವ ಹಕ್ಕನ್ನು ಪಡೆದಿದ್ದಾಳೆ.

**3. ಉಯಿಲು ಅಥವಾ ವಾಸಿಯಾತ್‌ನ ಹಕ್ಕು :**

ಯಾವುದೇ ಮುಸ್ಲಿಂ ಮಹಿಳೆಯರು ತನ್ನ ಆಸ್ತಿಯನ್ನು ವಾರಸುದಾರರಿಗೆ ಉಯಿಲು ಮಾಡಬಹುದು. ಒಬ್ಬ ಮುಸ್ಲಿಮನು ತನ್ನ ಒಟ್ಟು ಆಸ್ತಿಯ 1:3 ಭಾಗಕ್ಕಿಂತ ಹೆಚ್ಚು ಉಯಿಲು ಮಾಡುವಂತಿಲ್ಲ. ಆದರೆ ಒಬ್ಬ ಮಹಿಳೆಯು ಯಾವುದೇ ರಕ್ತ ಸಂಬಂಧಿಗಳನ್ನು ಹೊಂದಿಲ್ಲದಿದ್ದಾಗ ಆಕೆಯ ಪತಿಯೊಬ್ಬನೇ ವಾರಸುದಾರನಾಗುತ್ತನೆ. ಆಗ ಆಕೆಯು ತನ್ನ ಆಸ್ತಿಯ 2:3 ಭಾಗವನ್ನು ಅವನಿಗೆ ಉಯಿಲು ಮಾಡಿಕೊಡಬಹುದು. ಭಾರತೀಯ ಉತ್ತರಾಧಿಕಾರ ಅಧಿನಿಯಮದ ಮೇರೆಗೆ ಆಕೆಯು ತನ್ನ ಪೂರ್ತ ಆಸ್ತಿಯನ್ನು ತನಗೆ ಬೇಕಾದ ಯಾರಿಗಾದರೂ ಉಯಿಲು ಮಾಡುವ ಹಕ್ಕನ್ನು ಹೊಂದಿದ್ದಾಳೆ.

5. ಮಹಿಳೆಯು ತನ್ನ ಸ್ವ-ಇಚ್ಛೆಯಿಂದ ಆಸ್ತಿಯನ್ನು ಯಾರಿಗೆ ಬೇಕಾದರೂ ದಾನ ಮಾಡಬಹುದು. ಎಲ್ಲಾ ರೀತಿಯ ಆಸ್ತಿಯನ್ನು ದಾನವಾಗಿ ನೀಡಬಹುದು. ಈ ರೀತಿ ದಾನ ಮಾಡುವಾಗ ಕೆಲವು ವಿಷಯವನ್ನು ಮಾನ್ಯ ಮಾಡಬೇಕಾಗಿರುತ್ತದೆ.

ಎ) ದಾನ ಮಾಡುವ ಬಗ್ಗೆ ಇಚ್ಛೆಯನ್ನು ಘೋಷಿಸಿರಬೇಕು.

ಬಿ) ದಾನವನ್ನು ಅಂಗೀಕರಿಸಿರಬೇಕು.

ಸಿ) ದಾನವನ್ನು ಇತರ ವ್ಯಕ್ತಿಗೆ ನೀಡಿರಬೇಕು.

ಈ ರೀತಿಯಲ್ಲಿ ಮುಸ್ಲಿಂ ಮಹಿಳೆಯರಿಗೆ ತಮ್ಮದೇ ಆದ ಮಹತ್ತರದ ಹಕ್ಕುಗಳನ್ನು ಕೊಡಲಾಗಿದೆ. ಆದರೆ ಅವುಗಳನ್ನು ಪಡೆಯಲು ಆಕೆಯೇ ಹಿಂದೆ ಬಿದ್ದಿದ್ದಾಳೆ ಎಂದರೆ ತಪ್ಪಾಗಲಾರದು.

**ಕ್ರೈಸ್ತ ಮಹಿಳೆಯರ ಆಸ್ತಿಯ ಹಕ್ಕುಗಳು :**

ವಾರಸಾ ಮತ್ತು ಉತ್ತರಾಧಿಕಾರಕ್ಕೆ ಸಂಬಂಧಿಸಿದಂತೆ ಹಿಂದೂ, ಜೈನ, ಬೌದ್ಧ ಮತ್ತು ಸಿಖ್ ಧರ್ಮಿಯರಿಗೆ ಹಿಂದೂ ವಾರಸಾ ಅಧಿನಿಯಮ 1956 ಅನ್ವಯವಾಗುತ್ತದೆಯಾದರೆ, ಮಹಮ್ಮದಿಯರಿಗೆ ಇಸ್ಲಾಂ ವೈಯಕ್ತಿಕ ಕಾನೂನು ಅನ್ವಯವಾಗುತ್ತದೆ. ಹಾಗೆಯೇ ಕ್ರಿಶ್ಚಿಯನ್ನರಿಗೆ ಈ ಸಂಬಂಧವಾಗಿ "ಭಾರತೀಯ ವಾರಸಾ ಅಧಿನಿಯಮ 1925" (Indian Succession Act 1925) ಅನ್ವಯವಾಗುತ್ತದೆ. ಈ ರೀತಿಯ ನಮ್ಮ ಕಾನೂನು ನಮಗೆ ಆಸ್ತಿಯ ಒಡೆತನದ ಹಕ್ಕು ನೀಡಿದೆ. ಸ್ತ್ರೀ-ಪುರುಷರಿಬ್ಬರಿಗೂ ಆಸ್ತಿಯ ಮೇಲೆ ಹಕ್ಕಿದೆ. ಸರ್ಕಾರದಿಂದ ರಚಿತವಾದ ಕಾನೂನಿನ ಪ್ರಕಾರ ಮಹಿಳೆಯರಿಗೆ ಆಸ್ತಿಯ ಮೇಲಿನ ಹಕ್ಕುಗಳನ್ನು ಯಾವ ರೀತಿ ಹೊಂದಬಹುದೆಂದರೆ –

ಎ) ಪ್ರತಿಯೊಬ್ಬ ಮಹಿಳೆಗೂ ಅವಳಿಗಾಗಿ ಅವಳ ಹೆಸರಿನಲ್ಲಿ ಆಸ್ತಿಯನ್ನು ಅರ್ಜಿಸುವ ಮತ್ತು ಧಾರಣ ಮಾಡುವ ಹಕ್ಕು ಇದೆ.

ಬಿ) ಮಹಿಳೆಗೆ ಆಸ್ತಿ ಇದ್ದರೆ ಅದನ್ನು ಅವಳು ತನಗೆ ಇಚ್ಛಾನುಸಾರವಾಗಿ ಬಳಸಿಕೊಳ್ಳಬಹುದು.

ಸಿ) ಮಹಿಳೆ ತನ್ನ ಸಂಪಾದನೆಯನ್ನು ತಾನೇ ಇಟ್ಟುಕೊಳ್ಳುವ, ಅದನ್ನು ತನ್ನ ಇಚ್ಛೆಯ ಹಾಗೆ ಮಾಡುವ ಹಕ್ಕು ಹೊಂದಿರುತ್ತಾಳೆ.

ಡಿ) ಮಹಿಳೆಗೂ ಪುರುಷನಿಗಿರುವಂತೆಯೇ ಆಸ್ತಿಯನ್ನು ಖರೀದಿಸುವ ಮತ್ತು ಮಾರುವ ಹಕ್ಕು ಇರುತ್ತದೆ.

ಈ ರೀತಿ ಮಹಿಳೆಯರಿಗೂ ತಮ್ಮ ಸಂಬಂಧಿಗಳ ಅಥವಾ ಪಾಲಕರ ಆಸ್ತಿಯಲ್ಲಿ ಪಾಲನ್ನು ಹೊಂದಿರಬಹುದು. ಅದನ್ನು ಅವರ ಧರ್ಮಾನುಸಾರ ಕಾನೂನುಗಳಿಂದ ಪಡೆಯಬಹುದು. ಹಾಗಾಗಿ – ಕ್ರಿಶ್ಚಿಯನ್ ಮಹಿಳೆಯ ಆಸ್ತಿ ಹಕ್ಕುಗಳು ಈ ಕೆಳಕಂಡಂತಿವೆ.

1) ಒಬ್ಬ ಕ್ರಿಶ್ಚಿಯನ್ ವಿಧವೆಯು ತನ್ನ ಪತಿಯ ಆಸ್ತಿಯ 1/3ನೇ ಭಾಗಕ್ಕೆ ಹಕ್ಕುಳ್ಳವಳಾಗಿರುತ್ತಾಳೆ.

2) ಗಂಡು ಮಕ್ಕಳಿರಲಿ, ಹೆಣ್ಣು ಮಕ್ಕಳಿರಲಿ ಎಲ್ಲ ಮಕ್ಕಳಿಗೂ ಉಳಿದ ಆಸ್ತಿಯಲ್ಲಿ ಸಮಪಾಲು ಸಿಗುತ್ತದೆ.

3) ಯಾವುದೇ ವಿವಾಹಿತ ಮಹಿಳೆಗೂ ಸಹ ತನ್ನ ಸೋದರರು ಮತ್ತು ಸೋದರಿಯರಂತೆ ತನ್ನ ತಂದೆಯ ಆಸ್ತಿಯಲ್ಲಿ ಸಮಾನ ಹಕ್ಕಿರುತ್ತದೆ.

4) ಒಬ್ಬ ಮಗಳು ಅಥವಾ ಮಗ ನಿಧನ ಹೊಂದಿದರೆ ಅವಳ ಅಥವಾ ಅವನ ಮಕ್ಕಳು ಅವರ ಪಾಲಕರ ಪಾಲಿನ ಆಸ್ತಿಯನ್ನು ಪಡೆಯುತ್ತಾರೆ.

5) ಮದುವೆಯ ಸಮಯದಲ್ಲಿ ಸ್ತ್ರೀಗೆ ಅವಳ ತವರಿನವರು ಕೊಟ್ಟ ಯಾವುದೇ ಉಡುಗೊರೆ ಅವಳ ಸ್ವಂತ ಆಸ್ತಿ. ಅಂಥ ಆಸ್ತಿಯನ್ನು ಭಾಗ ಮಾಡುವಂತಿಲ್ಲ. ಅದು ಅವಳ ಹತ್ತಿರವೇ ಇರುತ್ತದೆ.

6) ಮಕ್ಕಳಿಲ್ಲದಿದ್ದರೆ ವಿಧವೆಗೆ 5000–00 ರೂ.ಗಳು ಮತ್ತು ಆ ಮೊತ್ತವನ್ನು ಕಳೆದುಳಿದ ಆಸ್ತಿಯ ಅರ್ಧ ಭಾಗವನ್ನು ಪಡೆಯಲು ಆಕೆಗೆ ಹಕ್ಕಿರುತ್ತದೆ. ಉಳಿದುದನ್ನು ತಂದೆ ಮುಂತಾದ ಇತರ ಉತ್ತರಾಧಿಕಾರಿಗಳಿಗೆ ನೀಡಲಾಗುತ್ತದೆ.

7) ಗರ್ಭಸ್ಥ ಶಿಶುವಿಗೂ ಆಸ್ತಿಯಲ್ಲಿ ಪಾಲಿದೆ. ಇತರ ಮಕ್ಕಳಂತೆ ಗರ್ಭಸ್ಥ ಮಗವೂ ತಂದೆಯ ಆಸ್ತಿಯಲ್ಲಿ ಪಾಲು ಪಡೆಯುತ್ತದೆ.

8) ಕ್ರಿಶ್ಚಿಯನ್ ಮಹಿಳೆ ಗಳಿಸಿದ ಹಣ ಅವಳ ಸ್ವಂತ ಆಸ್ತಿ. ಇದನ್ನು ಯಾರೂ ಸಹ ಪಡೆಯಲಾರರು. ಅದನ್ನು ಅವಳು ಅಂದರೆ ಒಡವೆ, ಹಣ ಹಾಗೂ ಇತರ ಆಸ್ತಿಯನ್ನು ತಾನು ಇಚ್ಛಿಸುವವರಿಗೆ ನೀಡಲು ಮರಣಶಾಸನವನ್ನು ಬರೆಯಲು ಅಥವಾ ಉಡುಗೊರೆಯಾಗಿ ನೀಡಲು ಆಕೆಗೆ ಹಕ್ಕಿರುತ್ತದೆ.

9) ಮದುವೆಯ ಸಂದರ್ಭದಲ್ಲಿ ತಂದೆ ಉಡುಗೊರೆ ಕೊಟ್ಟ ಹಣ ಖರ್ಚು ಮಾಡಿದರೂ, ಅವಳ ತಂದೆಯ ಆಸ್ತಿಯ ಹಕ್ಕುಳ್ಳವಳಾಗಿರುತ್ತಾಳೆ.

ಹೀಗೆ ಮೃತ ಕ್ರಿಶ್ಚಿಯನ್ ವ್ಯಕ್ತಿಯ ಆಸ್ತಿಯನ್ನು ವಿಧವೆ ಹೆಂಡತಿ ಪಡೆಯಬಹುದು. ಒಂದು ವೇಳೆ ವಿಧವೆಯು ಇಲ್ಲದಿದ್ದರೆ ಅವರ ನೇರ ವಂಶಜರು ಪಡೆಯಬಹುದು. ಒಂದು ವೇಳೆ ಅವರು ಬದುಕದಿದ್ದರೆ, ಇತರ ರಕ್ತ ಸಂಬಂಧಿಗಳು ಯಾರೂ ಇರದಿದ್ದಲ್ಲಿ ಆತನ ಎಲ್ಲ ಆಸ್ತಿಯು ಸರಕಾರಕ್ಕೆ ಸೇರುತ್ತದೆ. (ಕಲಂ 34) ಮೃತ ಕ್ರಿಶ್ಚಿಯನ್ ಮಹಿಳೆಯ ಆಸ್ತಿಯನ್ನು ಆಕೆಯ ಪತಿಯು ಪಡೆಯುವ ಹಕ್ಕನ್ನು ಹೊಂದಿರುತ್ತಾನೆ.

**ಮಹಿಳೆಯರು ಮತ್ತು ಪಂಚಾಯತ್ ರಾಜ್ ಸಂಸ್ಥೆಗಳು :**

ಭಾರತೀಯ ಸಮಾಜದಲ್ಲಿ ಮಹಿಳೆ ಮತ್ತು ಪುರುಷರಿಬ್ಬರೂ ಜೀವನದ ಎರಡು ಚಕ್ರಗಳಿದ್ದಂತ. ಜೀವನದ ಪ್ರತಿಯೊಂದು ಹಂತದಲ್ಲೂ ಮಹಿಳೆಯರು ಬಹಳ ಮಹತ್ವವಾದ ಪಾತ್ರವನ್ನು ವಹಿಸುತ್ತಿದ್ದಾರೆ. ಆ ನೆಲೆಯಲ್ಲಿ

ಮಹಿಳೆಯರನ್ನು ಸ್ವತಂತ್ರಗೊಳಿಸುವುದು ಎಂದರೆ ಮಹಿಳೆಯರಲ್ಲಿ ಸ್ವಶಕ್ತಿ, ಸ್ವಆಲೋಚನೆ, ಸ್ವಾಭಿಮಾನ ಹಾಗೂ ಸ್ವಸಾಮರ್ಥ್ಯ ಹಾಗೂ ಸ್ವತಂತ್ರ ಮನೋಭಾವವನ್ನು ಉಂಟುಮಾಡಬೇಕೆಂಬುದೇ ವಿನಃ ಪುರುಷರಿಗೆ ಸ್ಪರ್ಧಿಯಾಗಿ ನಿಲ್ಲಬೇಕೆಂಬ ಅರ್ಥವಲ್ಲ. ಮಹಿಳೆಯರು ರಾಜಕೀಯ ಅಧಿಕಾರದ ಮೂಲಕ ತಮ್ಮ ಸಮಸ್ಯೆಗಳನ್ನು ಬಗೆಹರಿಸಿಕೊಂಡು ಸಾಮಾಜಿಕ ಮತ್ತು ಆರ್ಥಿಕ ಕ್ಷೇತ್ರಗಳಲ್ಲಿ ಸಮಾನ ಅವಕಾಶಗಳನ್ನು ಕಲ್ಪಿಸಿಕೊಂಡು ಸ್ವಾತಂತ್ರ್ಯ ಸಮಾನತೆ ನ್ಯಾಯವನ್ನು ದೊರಕಿಸಿಕೊಂಡು ತಮ್ಮ ವ್ಯಕ್ತಿತ್ವ, ಗೌರವ, ಘನತೆಗಳನ್ನು ಎತ್ತಿ ಹಿಡಿಯಲು ಸಾಧ್ಯವಾಗುತ್ತದೆ.

ಮಹಿಳೆಯರು ಸಾಕಷ್ಟು ಸಂಖ್ಯೆಯಲ್ಲಿ ರಾಜಕೀಯದೊಳಕ್ಕೆ ಪ್ರವೇಶಿಸದೆ ಹೋದರೆ ಬದಲಾವಣೆ ಅಸಾಧ್ಯ. ಈ ನಿಟ್ಟಿನಲ್ಲಿ ಸ್ವಾತಂತ್ರ್ಯಾನಂತರ ಪ್ರಯತ್ನಗಳು ಸಾಗುತ್ತಿಲಿವೆ. 1957ರಲ್ಲಿ ಸಲ್ಲಿಸಲಾದ ಬಲವಂತ್‌ರಾಯ್ ಮೆಹ್ತಾ ವರದಿಯ ಶಿಫಾರಸ್ಸಿನನ್ವಯ 1959ರಲ್ಲಿ ಪಂಚಾಯತ್‌ರಾಜ್ ವ್ಯವಸ್ಥೆ ಆರಂಭವಾಯಿತು. ಈ ಸಮಿತಿಯ ಶಿಫಾರಸ್ಸಿನ ಪ್ರಕಾರ ಬ್ಲಾಕ್ ಮಟ್ಟದ ಸ್ಥಳೀಯಾಡಳಿತ ಸಂಸ್ಥೆಯಲ್ಲಿ 20 ಚುನಾಯಿತ ಸದಸ್ಯರ ಜೊತೆಗೆ ಇಬ್ಬರು ಮಹಿಳೆಯರನ್ನು ಸಹ ಸದಸ್ಯರನ್ನಾಗಿ ನೇಮಿಸಬಹುದಾಗಿತ್ತು. ಇದನ್ನು ಮಹಿಳೆಯರು ತಳಮಟ್ಟದಲ್ಲಿ ಸಕ್ರಿಯ ರಾಜಕೀಯದಲ್ಲಿ ಪಾಲ್ಗೊಳ್ಳಲು ಅನುವು ಮಾಡಿಕೊಟ್ಟ ಪ್ರಥಮ ಅಧಿಕೃತ ಘೋಷಣೆ ಎಂದು ಹೇಳಬಹುದು. ತದನಂತರ 1961ರ ಮಹಾರಾಷ್ಟ್ರ ಜಿಲ್ಲಾ ಪರಿಷದ್ ಮತ್ತು ಪಂಚಾಯತ್ ಕಾಯ್ದೆಯು ಸ್ಥಳಿಯಾಡಳಿ ಸಂಸ್ಥೆಗಳಲ್ಲಿ ಮಹಿಳೆಯರು ಚುನಾಯಿತರಾಗದಿದ್ದ ಪಕ್ಷದಲ್ಲಿ ಒಬ್ಬ ಅಥವಾ ಇಬ್ಬರು ಮಹಿಳೆಯರನ್ನು ನಾಮನಿರ್ದೇಶಿಸಲು ಅವಕಾಶ ಮಾಡಿಕೊಟ್ಟಿತು. ಭಾರತದ ಹೆಚ್ಚಿನ ಭಾಗದಲ್ಲಿ 60, 70ರ ದಶಕಗಳಲ್ಲಿ ಪಂಚಾಯತ್‌ಗಳಿಗೆ ಮಹಿಳೆಯರು ಚುನಾವಣೆಗೆ ಬದಲಾಗಿ ಹೆಚ್ಚಾಗಿ ನಾಮನಿರ್ದೇಶನದ ಮೂಲಕವೇ ಸಹ ಸದಸ್ಯರಾಗುತ್ತಿದ್ದರು. ಮಹಿಳೆಯರಿಗೆ 30% ಮೀಸಲಾತಿ ಒದಗಿಸುವಲ್ಲಿ ಸಂವಿಧಾನದ 64ನೇ ತಿದ್ದುಪಡಿ ಮಸೂದೆಯನ್ನು 1989ರಲ್ಲಿ ಸಂಸತ್ತಿನಲ್ಲಿ ಮಂಡಿಸಲಾಯಿತು. ಆದರೆ ರಾಜ್ಯಸಭೆಯಲ್ಲಿ ಮಸೂದೆಗೆ ಸೋಲಾಲಾದುದರಿಂದ ಅದು ಅಂಗೀಕಾರವಾಗಲಿಲ್ಲ. ಮತ್ತೆ ಈ ಮಸೂದೆಯನ್ನು 1991ರ ಸೆಪ್ಟೆಂಬರ್‌ನಲ್ಲಿ ಸಂವಿಧಾನದ 72ನೇ ಮತ್ತು 73ನೇ ಮಸೂದೆಗಳಾಗಿ ಮತ್ತೊಮ್ಮೆ ಸಂಸತ್ತಿನಲ್ಲಿ ಮಂಡಿಸಲಾಯಿತು. ಇದರಲ್ಲಿ ಮಹಿಳೆಯರಿಗೆ ಸ್ಥಳಿಯಾಡಳಿತ ಸಂಸ್ಥೆಗಳ ಅಧ್ಯಕ್ಷ ಹುದ್ದೆಯಲ್ಲಿ ಕೂಡ 1/3ರಷ್ಟು ಮೀಸಲಾತಿ ನೀಡುವ ಪ್ರಸ್ತಾಪವಿತ್ತು. ನಂತರ ಈ ಮಸೂದೆಗಳು ಅಂತಿಮವಾಗಿ 1992ರ ಡಿಸೆಂಬರ್‌ನಲ್ಲಿ ಅಂಗೀಕಾರವಾದವು. 1993ರ ಏಪ್ರಿಲ್‌ನಲ್ಲಿ ಅರ್ಧದಷ್ಟು ರಾಜ್ಯಗಳು ಈ ಮಸೂದೆಗೆ ಒಪ್ಪಿಗೆ ನೀಡುವ ಮೂಲಕ 1993ರ ಏಪ್ರಿಲ್ 24ರಂದು ಭಾರತ ಸಂವಿಧಾನದ 73 ಮತ್ತು 74ನೇ ತಿದ್ದುಪಡಿಗಳಾಗಿ ಅಸ್ತಿತ್ವಕ್ಕೆ ಬಂದವು. ಈ ತಿದ್ದುಪಡಿಗಳು ಮಹಿಳೆಯರ ಸಬಲೀಕರಣದಲ್ಲಿ ಒಂದು ಪ್ರಮುಖ ಘಟ್ಟವಾಯಿತು. ಇದರಿಂದಾಗಿ ಮಹಿಳೆಯರು ನೇರವಾಗಿ ರಾಜಕೀಯ ಮತ್ತು ಆಡಳಿತದಲ್ಲಿ ಪಾಲ್ಗೊಳ್ಳುವ ಹಕ್ಕನ್ನು ಪಡೆದಂತಾಯಿತು.

ಈ ನಿಟ್ಟಿನಲ್ಲಿ ಸಾಮಾಜಿಕ ಕಾಳಜಿಯುಳ್ಳ ಪುರುಷರು ಮಹಿಳೆಯರ ರಾಜಕೀಯ ಭಾಗವಹಿಸುವಿಕೆಗೆ ಹೆಚ್ಚು ಪ್ರೋತ್ಸಾಹಬೇಕಾಗಿದೆ. ಅದೇ ರೀತಿ ಗ್ರಾಮ ಪಂಚಾಯಿತಿಯಲ್ಲಿ ಕಾರ್ಯನಿರ್ವಹಿಸುವಾಗ ಮಹಿಳಾ ಸದಸ್ಯರು ಯಾವುದೇ

ಸಂಕೋಚ, ಕೀಳರಿಮೆಯನ್ನು ತೊರೆದು ಯಾವುದೇ ಒತ್ತಡಕ್ಕೆ ಒಳಗಾಗದೆ ಧೈರ್ಯ ಮತ್ತು ಆತ್ಮವಿಶ್ವಾಸದಿಂದ ಕೆಲಸ ಮಾಡಲು ಅವರಿಗೆ ಅಗತ್ಯವಾದ ಆಡಳಿತಾತ್ಮಕ ಹಾಗೂ ರಾಜಕೀಯವಾದ ತರಬೇತಿಯನ್ನು ನೀಡಬೇಕು. ಅವರ ಸಮಸ್ಯೆಗಳನ್ನು ಬಗೆಹರಿಸಲು ಹಾಗೂ ತನ್ನ ಹಕ್ಕುಗಳನ್ನು ಚಲಾಯಿಸಲು ಮಹಿಳೆಯರನ್ನು ಸಶಕ್ತರನ್ನಾಗಿಸುವುದು. ವಿವಿಧ ಗ್ರಾಮ ಪಂಚಾಯಿತಿಯ ಚುನಾಯಿತ ಮಹಿಳೆ ಪ್ರತಿನಿಧಿಗಳ ನಡುವೆ ಸೌಹಾರ್ದ, ಸಾಮರಸ್ಯ, ಹೊಂದಾಣಿಕೆ, ಪರಸ್ಪರರಲ್ಲಿ ವಿಶ್ವಾಸಗಳ ಸಂಬಂಧ ಬೆಳೆಯುವಂತೆ ಮಾಡಬೇಕು. ಯಾವುದೇ ವಿಚಾರಗಳನ್ನು ಕುರಿತ ವಿವಾದ, ಸಮಸ್ಯೆಗಳ ಬಗ್ಗೆ ಆ ಮಹಿಳಾ ಆಂದೋಲನವನ್ನು ಹುಟ್ಟು ಹಾಕಲು ಮಹಿಳಾ ಸದಸ್ಯರಲ್ಲಿ ಜಾಗೃತಿ ಮೂಡಿಸಬೇಕು. ಐಕ್ಯತೆ ಮತ್ತು ಸಹಕಾರದ ಮನೋಭಾವ ತಮ್ಮೊಳಗೆ ಬೆಳೆಯಬೇಕು. ಇದಕ್ಕೆ ಪರಿಹಾರವೆಂದರೆ ಸೂಕ್ತ ಮಹಿಳಾ ಮಂಡಳಿಗಳನ್ನು ರಚಿಸಬೇಕು.

ಆಡಳಿತದಲ್ಲಿ ಮಹಿಳೆಯರ ಪಾಲ್ಗೊಳ್ಳುವಿಕೆಯು ಅವರಲ್ಲಿ ಪರಿವರ್ತನೆಯನ್ನು ತಂದೊಡ್ಡಿದೆ. ಪುರುಷರಿಗೆ ಸರಿಸಮಾನವಾಗಿ ಸವಾಲು ಒಡ್ಡುವ ಮೂಲಕ, ಸಂಪನ್ಮೂಲಗಳು, ಅಧಿಕಾರಗಳು ಮತ್ತು ಎಲ್ಲರ ಮೇಲೆ ನಿಯಂತ್ರಣ ಸಾಧಿಸುವ ಮೂಲಕ ಒಂದು ರೀತಿಯಲ್ಲಿ ಸಶಕ್ತೀಕರಣವನ್ನು ಇಂದು ಮಹಿಳೆ ಸಾಧಿಸಿದ್ದಾಳೆ. ಇನ್ನೊಂದೆಡೆ ಪಂಚಾಯತ್ ವ್ಯವಸ್ಥೆಯಲ್ಲಿ ಮಹಿಳಾ ಸದಸ್ಯರು ಸ್ವಂತಿಕೆಯಿಂದ ಕಾರ್ಯನಿರ್ವಹಿಸದೆ ತಮ್ಮ ಗಂಡಂದಿರ ಮಾರ್ಗದರ್ಶನದಿಂದ ಕಾರ್ಯನಿರ್ವಹಿಸುವ ನಿದರ್ಶನಗಳಿವೆ. ಕೆಲವೊಮ್ಮೆ ಸಭೆ ಎಂದರೇನು? ಹೇಗೆ ಸಭೆಯನ್ನು ಆಯೋಜಿಸಬೇಕು? ಹಾಗೂ ತಾವು ಜನಗಳಿಗೆ ಏನನ್ನು ನೀಡಬೇಕು ಎಂಬ ತಿಳುವಳಿಕೆಯು ಇರುವುದಿಲ್ಲ. ಕಾರಣ ಆಕೆಗೆ ದೊರಕಿರುವ ಕಡಿಮೆ ವಿದ್ಯಾಭ್ಯಾಸದ ಮಟ್ಟವಿರುವುದು. ಅದರಲ್ಲೂ ಜಾತಿ ಮೀಸಲಾತಿಯಡಿ ಆಯ್ಕೆಯಾದ ಮಹಿಳಾ ಸದಸ್ಯರನ್ನು ಸಾಮಾಜಿಕ ಮತ್ತು ಆರ್ಥಿಕ ಪ್ರತಿಕೂಲತೆಗಳು ಬಾಧಿಸುತ್ತವೆ. ಅವುಗಳೆಂದರೆ ಅನಕ್ಷರತೆ, ಅತ್ಯಲ್ಪ ಉತ್ಪಾದಕ ಆಸ್ತಿ, ಕೂಲಿಯಾಧಾರಿತ ಜೀವನ ಇತ್ಯಾದಿ. ಇವುಗಳನ್ನು ಸಂವಿಧಾನದ ತಿದ್ದುಪಡಿಯಿಂದ ಬದಲಿಸಲು ಸಾಧ್ಯವಿಲ್ಲ.

ಒಟ್ಟಿನಲ್ಲಿ ಗ್ರಾಮ ಪಂಚಾಯಿತಿಗಳು ಮಹಿಳೆಯರ ವಿಶಿಷ್ಟ ಸಮಸ್ಯೆಗಳನ್ನು ಗುರುತಿಸಿ ಸೂಕ್ತ ಯೋಜನೆಗಳನ್ನು ಹಾಕಿಕೊಳ್ಳಬೇಕು. ಅವರ ಆದಾಯ ಹೆಚ್ಚಿಸುವ ಯೋಜನೆಗಳ ಬಗ್ಗೆ ಸ್ವಸಹಾಯ ಗುಂಪುಗಳ ರಚನೆ, ಮಹಿಳಾ ಮತ್ತು ಯುವತಿ ಮಂಡಳಿಗಳು ವಿವಿಧ ಬಡತನ ನಿರ್ಮೂಲನಾ ಕಾರ್ಯಗಳಡಿಯಲ್ಲಿನ ಪ್ರಯೋಜನಗಳ ಬಗ್ಗೆ ತರಬೇತಿ ಪಡೆಯಬೇಕು. ಪ್ರಸ್ತುತ ಕೆಲವೊಂದು ಸ್ವ–ಸಹಾಯ ಗುಂಪುಗಳು, ತರಕಾರಿ, ಕೃಷಿ, ಆಹಾರ ಸಂರಕ್ಷಣೆ ಉಡುಪು ತಯಾರಿಸುವಿಕೆ ಮೊದಲಾದ ಆದಾಯ ಹೆಚ್ಚಿಸುವ ಯೋಜನೆಗಳ ಮೂಲಕ ಮಹಿಳೆಯರ ಆರ್ಥಿಕ ಸ್ವಾತಂತ್ರ್ಯವನ್ನು ಹೆಚ್ಚಿಸಿ ಜನತೆಯ ಜೀವನ ಮಟ್ಟವನ್ನು ಸುಧಾರಿಸಲು ಪ್ರಯತ್ನಿಸಿವೆ. ಇಲ್ಲಿ ಸ್ವಸಹಾಯ ಗುಂಪುಗಳು ಸಕ್ರಿಯವಾಗಿ, ಕಾರ್ಯನಿರ್ವಹಿಸುತ್ತಿವೆಯೋ ಅಲ್ಲಿ ಗ್ರಾಮಸಭೆಯ ಸಭೆಗಳಲ್ಲಿ ಮಹಿಳೆಯರು ಭಾಗವಹಿಸುವಿಕೆಯು ಹೆಚ್ಚಾಗಿರುತ್ತದೆ. ಆದ್ದರಿಂದ ಗ್ರಾಮ ಪಂಚಾಯಿತಿಗಳು ಅಭಿವೃದ್ಧಿ ಕಾರ್ಯಕ್ರಮಗಳನ್ನು ಜಾರಿಗೊಳಿಸುವಲ್ಲಿ ಸೂಕ್ತ

ಬೆಂಬಲವನ್ನು ನೀಡುವ ಸ್ವಸಹಾಯ ಗುಂಪುಗಳನ್ನು ಗುರುತಿಸುವ ಹಾಗೂ ಮೌಲ್ಯಮಾಪನ ಮಾಡುವ ಕಾರ್ಯವು ಅತ್ಯವಶ್ಯಕವಾಗಿದೆ. ಪ್ರತಿಯೊಂದು ಗ್ರಾಮದಲ್ಲಿಯೂ ಜಾಗೃತ ಮಹಿಳಾ ಸಂಘಗಳು ಸ್ಥಾಪನೆಗೊಳ್ಳಬೇಕು. ಈ ಸಂಘ ಗ್ರಾಮಕ್ಕೆ ಸಂಬಂಧಿಸಿದಂತೆ ನಾಗರೀಕ ಸೌಲಭ್ಯಗಳು ಕುಡಿಯುವ ನೀರು, ಆರೋಗ್ಯ ಹಾಗೂ ನೈರ್ಮಲ್ಯ, ಸಮರ್ಪಕ ಆಹಾರ ವಿತರಣೆಗಳ ಬಗ್ಗೆ ಚರ್ಚಿಸಬೇಕು. ಮಹಿಳೆಯರಲ್ಲಿ ಶಾಶ್ವತವಾದ ಜಾಗೃತಿ, ಜ್ಞಾನ, ಪ್ರಜ್ಞೆಗಳ ಮೂಲಕ ಮಾತ್ರ ಮಹಿಳೆಯರ ಹಕ್ಕುಗಳು ಸ್ವಾತಂತ್ರ್ಯ ಮತ್ತು ಸಮಾನತೆಯನ್ನು ರಕ್ಷಿಸಲು ಸಾಧ್ಯ.

ಈ ರೀತಿ ಮಹಿಳಾ ಪ್ರಾತಿನಿಧ್ಯದ ಮೇಲೆ ಮೀಸಲಾತಿ ನೀತಿಗಳು ಪರಿಣಾಮಕಾರಿಯಾದ ಪ್ರಭಾವವನ್ನು ಹೊಂದಿವೆ. ಮಹಿಳೆಯರು ಹೆಚ್ಚಿನ ಸಂಖ್ಯೆಯಲ್ಲಿ ಸದಸ್ಯರಿರುವ ಪಂಚಾಯತ್‌ಗಳಲ್ಲಿ ಕುಡಿಯುವ ನೀರು, ರಸ್ತೆ ನಿರ್ಮಾಣ, ಆರೋಗ್ಯ, ಸಾರ್ವಜನಿಕ ಶೌಚಾಲಯ ಇತ್ಯಾದಿ ಮೂಲಭೂತ ಸೌಕರ್ಯಗಳಿಗೆ ಹೆಚ್ಚಿನ ಅನುದಾನವನ್ನು ಉಪಯೋಗಿಸಲಾಗುತ್ತಿದೆ. ಮಹಿಳಾ ಪ್ರತಿನಿಧಿಗಳು ಮಹಿಳಾ ಪ್ರಧಾನ ವಿಷಯಗಳ ಕಡೆಗೆ ಹೆಚ್ಚಿನ ಗಮನ ಹರಿಸುತ್ತಾರೆ. ಮತ್ತು ಅದಕ್ಕೆ ಸಂಬಂಧಿಸಿದಂತೆ ಕಾಯಿದೆಗಳನ್ನು ಸಹ ಜಾರಿಗೊಳಿಸುವಲ್ಲಿ ಕೂಡ ಹೆಚ್ಚು ಯಶಸ್ವಿಯಾಗಿದ್ದಾಳೆ ಎಂದರೆ ತಪ್ಪಾಗಲಾರದು. ಈ ಮೂಲಕ ರಾಜಕೀಯ ಹಕ್ಕನ್ನು ಪಡೆದುಕೊಳ್ಳುವಂತಾಗಿದೆ.

# ಅಧ್ಯಾಯ - 6

## ಉಪಸಂಹಾರ

ಪ್ರಾಚೀನ ಕಾಲದ ಸ್ತ್ರೀಯರಿಂದ ಇಂದಿನವರೆಗೂ ತಿಳಿದ ವಿಚಾರಗಳಲ್ಲಿನ ಆಶಯವೆಂದರೆ ಭಾರತದ ಸಮಾಜಗಳಲ್ಲಿ ಸ್ತ್ರೀಗೆ ಅಗ್ರಮಾನ್ಯ ಸ್ಥಾನಮಾನಗಳಿದ್ದರೂ ಆಕೆಯನ್ನು ಸಾಮಾಜಿಕವಾಗಿ, ಸಾಂಸ್ಕೃತಿಕವಾಗಿ, ಆಧ್ಯಾತ್ಮಿಕವಾಗಿ ಬಂಧಿಸಿದ್ದಾರೆ. ಹೆಣ್ಣಿನ ಬಗ್ಗೆ ಹುಟ್ಟಿದಾಗಲೇ ತಾತ್ಸಾರ, ಬೇಸರಗಳು ಉಂಟಾಗುತ್ತದೆ. ಗಂಡು ಮಗು ಹುಟ್ಟಿದಾಗ ಲಾಡು, ಚಿರೋಟಿಯಂತಹ ಊಟವನ್ನು, ಹೆಣ್ಣು ಮಗು ಹುಟ್ಟಿದಾಗ ಮಿಠಾಯಿ, ಕೊಬ್ಬರಿ ಸಕ್ಕರೆ ನೀಡುವುದರಲ್ಲಿ ಆಕೆಯ ಸಮಾನ ಸ್ಥಾನಗಳನ್ನು ಗಂಡಿನಿಂದ ಈ ವ್ಯತ್ಯಯಗಳನ್ನು ಕಾಣುತ್ತೇವೆ. ಇಲ್ಲಿಂದಲೇ ಅವಳ ಹಕ್ಕುಗಳಿಗೆ ಚ್ಯುತಿ ಪ್ರಾರಂಭವಾಗುತ್ತದೆ. ಪರೋಕ್ಷವಾಗಿ ಆಕೆಯನ್ನು ಹೊಗಳುವ ಆಕೆಯ ಸೌಂದರ್ಯವನ್ನು ವರ್ಣಿಸುವವರಿಗೆ ಕಡಿಮೆ ಏನೂ ಇಲ್ಲ.

ಮಾನವನಂತಹ ಜ್ಞಾನಿಯೂ ಸಹ ಹೆಣ್ಣಿಲ್ಲದೆ ಯಾವುದೇ ಧಾರ್ಮಿಕ ಕೆಲಸಗಳನ್ನು ನಡೆಸಲಾಗದು. ಸ್ತ್ರೀಯರನ್ನು ಪೂಜಿಸುವುದರಿಂದ ದೇವ-ದೇವತೆಗಳು ಸಂತುಷ್ಟರಾಗುತ್ತಾರೆ ಎಂದು ಹೊಗಳಿ ಹೇಳಿದರೂ ಕೊನೆಯಲ್ಲಿ ಹೆಣ್ಣು ಸ್ವಾತಂತ್ರ್ಯಕ್ಕೆ ಅರ್ಹಳಲ್ಲ ಎಂದು ಸಹ ಹೇಳಿದ್ದಾನೆ. ಹಾಗಾಗಿ ಸ್ತ್ರೀ ಅಬಲೆ, ಅಹಿಂಸಾಮೂರ್ತಿ, ಜಗತ್ ಜನನಿ, ಸಂಸ್ಕೃತಿಯ ಮೂರ್ತಿಣಿ, ಅಷ್ಟಲಕ್ಷ್ಮಿಯ ಸಾಕಾರ ಮೂರ್ತಿ ಎಂದು ವೈಭವೀಕರಿಸಿದ್ದಾರೆ. ಹೆಣ್ಣಿನ ಬಗ್ಗೆ ಆದರಗಳಿಂದ ಕಾಣುವ ಮನೆ ನಂದಗೋಕುಲವಾಗುತ್ತದೆ. ಪ್ರೀತಿ, ಧರ್ಮ, ಕರುಣೆ, ಸಹನೆಗಳ ಚಿಲುಮೆಯಾಗಿ ಹೆಣ್ಣು ಗಂಡನ ಮನೆಯಲ್ಲಿ ಏನೇ ಕಷ್ಟ ಸುಖಗಳಿದ್ದರೂ ಜಯಿಸಬಲ್ಲಳು ಎಂದಿದ್ದಾರೆ. ಸರ್ವಜ್ಞಕವಿಯು 'ಹೆಂಡರಿಲ್ಲದವನ ಸಂಸಾರ ಮಳಲೊಳಗೆ ಎಣ್ಣೆ ಹೋಯ್ದಂತೆ' ನಿರರ್ಥಕ ಎಂದಿದ್ದಾರೆ. ಕುವೆಂಪುರವರು ಹೇಳಿಕೆಯಲ್ಲಿ "ಬುದ್ಧನು ಸಾಂಸಾರಿಕವಾಗಿ ತ್ಯಾಗ ಹೊಂದುವಾಗ ಮಡದಿ ಯಶೋಧರೆಯ ಕಾಲಿಗೆ ನಮಸ್ಕರಿಸುತ್ತಾನೆ" ಎಂದಿದ್ದಾರೆ. ಶ್ರೀ ರಾಮಕೃಷ್ಣ ಪರಮಹಂಸರು "ತಮ್ಮ ಪತಿ ಶಾರದಾ ದೇವಿಯನ್ನು ದೇವಿಯ ಪೀಠದಲ್ಲಿ ಕುಳ್ಳಿರಿಸಿ ಪೂಜಿಸಿದರು" ಭಾರತವು ಇಂತಹ ಸ್ತ್ರೀ ರತ್ನಗಳ ಬೀಡಾಗಿದೆ. ಮುಂದುವರಿದು ಗಾರ್ಗಿ, ಮೈತ್ರೇಯಿ, ಅರುಂಧತಿ, ಕೌಸಲ್ಯ, ಅಹಲ್ಯಾ, ಸೀತೆ, ಮಂಡೋದರೆ, ಅಕ್ಕಮಹಾದೇವಿಯಂತಹ ಸಾಧ್ವಿಮಣಿಗಳಲ್ಲದೆ ಓಬವ್ವ, ಕಿತ್ತೂರು ಚೆನ್ನಮ್ಮ, ಸರೋಜಿನಿ ನಾಯ್ಡು, ಕಸ್ತೂರಿಬಾ, ಝಾನ್ಸಿರಾಣಿ ಲಕ್ಷ್ಮಿಬಾಯಿ, ಬೆಳವಡಿ ಮಲ್ಲಮ್ಮನಂತವರು ವೀರ ಮಹಿಳೆಯಾಗಿ ರಾಷ್ಟ್ರ ರಕ್ಷಣೆಗೆ ಪ್ರಾಣಾರ್ಪಣೆ ಮಾಡಿದ್ದಾರೆ. ಡಾ. ಅನಿಬೆಸೆಂಟ್, ಮದರ್ ತೆರೆಸಾ, ಸಿಸ್ಟರ್ ನಿವೇದಿತಾನಂತಹ ಮಹಿಳೆಯರು ಸಾಮಾಜಿಕ ಸೇವೆಯಲ್ಲಿ ದುಡಿದಿದ್ದಾರೆ. ಹೆಣ್ಣಿನ ಕೆಲಸ ಕೇವಲ ಅಡಿಗೆಯ ಮನೆಯ ನಾಲ್ಕು ಗೋಡೆಗಳ ಮಧ್ಯೆಯಲ್ಲಿ ಮಾತ್ರವಲ್ಲ, ಆಕೆಗೂ ಗಂಡಿಸಿನಷ್ಟೇ ಪ್ರಾಮುಖ್ಯತೆ, ಪ್ರತಿಭೆಗಳಿರುತ್ತವೆಂದು ನಿದರ್ಶಿಸಬಹುದು. ಇವರುಗಳಿಗೆ ಯಾರೂ ಹಕ್ಕುಗಳನ್ನು ನೀಡಿಲ್ಲ. ತಮ್ಮ ಸಾಮರ್ಥ್ಯ ಹಾಗೂ ಪ್ರತಿಭೆಗಳ ಮೂಲಕ, ಸೇವೆಗಳ ಮೂಲಕ ತಮ್ಮನ್ನು ತಾವು ಗುರುತಿಸಿಕೊಂಡು ಹಲವು ಕಾರ್ಯಯೋಜನೆಗಳಲ್ಲಿ ತೊಡಗಿಸಿಕೊಂಡರು.

ಹೆಣ್ಣು ಕೇವಲ ಮಾಯೆಯೆಂಬ ಭಾವನೆಯನ್ನು ತೊಡೆದು, ಆಕೆ ಮಾಯೆಯಲ್ಲ, ಹೆಣ್ಣು ಒಂದು ಶಕ್ತಿ ಲೀಲೆ, ಆಕೆಯನ್ನು ಬಂಧನದಿಂದ ಬಿಡಿಸಿ, ಆಕೆಯ ಅಭಿರುಚಿಯನ್ನು ಪ್ರೋತ್ಸಾಹಿಸಿದಾಗ ಸಾಮಾಜಿಕ, ಆರ್ಥಿಕ, ಶೈಕ್ಷಣಿಕ, ಕ್ರೀಡೆ, ಕಾನೂನು ಮುಂತಾದ ಕ್ಷೇತ್ರಗಳಲ್ಲಿ ಆಕೆಯ ಸಾಧನೆಗಳನ್ನು ಗಮನಾರ್ಹವಾಗಿ ವೀಕ್ಷಿಸಬಹುದು. ಆ ದಿಸೆಯಲ್ಲಿ ಅವಳಿಗೆ ಒಳ್ಳೆಯ ಶಿಕ್ಷಣದ ಅವಶ್ಯಕತೆ ಇದೆ. ಆ ಮೂಲಕ ಉದ್ಯೋಗವನ್ನು ಕೈಗೊಳ್ಳುವ ಆಸ್ತಿಯ ಪಾಲನ್ನು ಪಡೆಯುವ, ಸಾರ್ವಜನಿಕ ಜೀವನದಲ್ಲಿ ಮತ್ತು ರಾಜಕೀಯ ಕ್ಷೇತ್ರದಲ್ಲಿ ಪಾಲ್ಗೊಳ್ಳುವ ಹಕ್ಕನ್ನು ಪಡೆಯುತ್ತಾಳೆ. ಆಕೆಗೆ ಇತ್ತೀಚೆಗೆ ಶೇ. 30ರಷ್ಟು ಮೀಸಲಾತಿ ದೊರೆಯುವ ಅವಕಾಶವೂ ಒದಗಿದೆಯೆಂದರೆ ನಿಜವಾಗಿ ಶೇ. 50ರಷ್ಟು ದೊರಕಿದರೆ ಮಾತ್ರ ಅವಳ ಹಕ್ಕುಗಳು ಅವಳಿಗೆ ದೊರಕಿದಂತಾಗುತ್ತದೆ.

ಭಾರತ ಸ್ವತಂತ್ರವಾದ ನಂತರ ರಚಿತವಾದ ನಮ್ಮ ಸಂವಿಧಾನವು ಸ್ತ್ರೀ – ಪುರುಷರು ಎಲ್ಲ ವಿಷಯಗಳಲ್ಲಿಯೂ ಸರಿಸಮಾನರು ಎಂದು ಘೋಷಿಸಿದೆ. ಜನರ ದೃಷ್ಟಿಕೋನವು ಕೂಡ ಇದೀಗ ಮಾರ್ಪಡಿಸಿದ್ದು, ಸ್ತ್ರೀಯರ ಸ್ಥಾನಮಾನಗಳು ಎತ್ತರಿಸಲ್ಪಟ್ಟಿವೆ. ಪುರುಷರಿಗೆ ಸರಿಸಮಾನವಾದ ಹಕ್ಕು ಬಾಧ್ಯತೆಗಳನ್ನು ಸಾಮಾಜಿಕ ಅಂತಸ್ತನ್ನು ಅವರು ಅನುಭವಿಸುತ್ತಿದ್ದಾರೆ ಅಂದರೆ ಕೇವಲ ಕೆಲವು ಮಂದಿಗಳಿಗೆ ಮಾತ್ರ ಲಭ್ಯವಾಗಿದೆ. ಮುಂದುವರೆದ ಸ್ತ್ರೀಯರು ಹೆಚ್ಚು ಭಾವುಕರಾಗುತ್ತಿದ್ದಾರೆ.

ಹತ್ತೊಂಭತ್ತನೆಯ ಶತಮಾನದಲ್ಲಿ ಭಾರತದ ಕೆಲವು ಸಮಾಜ ಸುಧಾರಕರು ಮಹಿಳೆಯರ ಪಾತ್ರವನ್ನು ಆಧುನೀಕರಿಸುವ ಬಗ್ಗೆ ತಲೆಕೆಡಿಸಿಕೊಳ್ಳದೆ ಹೋಗದಿದ್ದರೆ ಭಾರತದಲ್ಲಿ ಮಹಿಳಾ ಹಕ್ಕುಗಳ ಹೋರಾಟ ಇಷ್ಟು ತೀವ್ರವಾಗಿ ಪ್ರಗತಿಯಾಗುತ್ತಿರಲಿಲ್ಲ. ಆ ಕಾಲದ ಗಂಡಸರು ಸತಿಸಹಗಮನ, ಬಾಲ್ಯವಿವಾಹ, ವಿಧವಾ ವಿವಾಹ ಹಾಗೂ ಸ್ತ್ರೀ ಶಿಕ್ಷಣಗಳಂತಹ ವಿಷಯಗಳಿಗಷ್ಟೇ ಗಮನ ಕೊಟ್ಟು ಆ ಮೂಲಕ ಪ್ರಯತ್ನಗಳನ್ನು ಯಶಸ್ವಿಗೊಳಿಸಿದ್ದಾರೆ. ಆದರೆ ಅವು ಅಷ್ಟಕ್ಕೆ ಕೊನೆಗೊಂಡಿವೆ. ನಂತರ ಹೋರಾಟದಲ್ಲಿ ಪುರುಷರ ತೀರ್ಮಾನವೇ ಅಂತಿಮವಾಗಿ ಮಹಿಳೆಯರಿಗೆ ಇದು ಬೇಕಿತ್ತೊ ಬೇಡವಾಗಿತ್ತೋ ಎಂಬ ಪ್ರಶ್ನೆಗೆ ಅವಕಾಶವೇ ಇಲ್ಲದಂತೆ, ಮಹಿಳೆಯರು ಹೊಸ ಸಮಾಜದ ಭಾಗವಂತೂ ಆಗಿಹೋದರು. ಈ ಹೊಸ ಜಗತ್ತಿನಲ್ಲಿ ಮಹಿಳೆಯರು ತಮಗೆ ದೊರೆತ ಅವಕಾಶದಲ್ಲಿ ಬದುಕುಳಿದ್ದಷ್ಟೇ ಅಲ್ಲ, ತಮ್ಮದೇ ಹೊಸ ಜಗತ್ತುಗಳನ್ನು ಕಲ್ಪಿಸಲು ಕೂಡ ಸಮರ್ಥರಾದರು.

ಬ್ರಿಟಿಷ್ ಆಡಳಿತ ಕೊನೆಗಂಡು ದೇಶವು ಸ್ವತಂತ್ರವಾದ ಮೇಲಂತೂ ಭಾರತದ ಸಂವಿಧಾನದಲ್ಲೂ, ಇತರ ಮುಖ್ಯ ನೆಲೆಗಳಲ್ಲೂ ರಾಷ್ಟ್ರ ನಿರ್ಮಾಣದಲ್ಲಿ ಸಮಾನತೆಯ ಭರವಸೆಯನ್ನು ನೀಡಿ ಮಹಿಳೆಗೆ ಹೊಸ ಮನ್ನಣೆಯನ್ನು ದೊರಕಿಸಲಾಯಿತು. ಇದರರ್ಥ ಮಹಿಳೆಯರಿಗೆ ಸಮಾನತೆ ದಕ್ಕಿಯೇ ಹೋಯಿತೆಂದೇನಲ್ಲ. ಹಕ್ಕುಗಳನ್ನು ನೀಡಲಾಗುವ ಸಂದರ್ಭಗಳು ವಿರಳ, ಅವುಗಳನ್ನು ಗೆಲ್ಲಬೇಕಾಗುತ್ತದೆ ಎಂಬ ಅರಿವು ಮೂಡುವಂತಾಯಿತು. ಸ್ವಾತಂತ್ರ್ಯಾನಂತರ ಸಂಘರ್ಷಗಳೆಲ್ಲ ಮುಗಿದ ಮೇಲೆ ಅನೇಕ ಮಹಿಳೆಯರು ತಮಗೆ ಸಾಕಷ್ಟು ದಕ್ಕಿತೆಂಬ ಬಗ್ಗೆ ಸಂತುಷ್ಟರೇ ಆದರು. ಆಡಳಿತ ಪಕ್ಷವಾಗಿದ್ದ ಕಾಂಗ್ರೆಸ್ ಮಹಿಳಾ ಕಾಳಜಿಗಳ ಬಗೆಗೆ ಸಾಕಷ್ಟು ಬಾಯುಪಚಾರ ಹೇಳಿ, ಕೆಲವು ಸಮಾಜ ಕಲ್ಯಾಣದ ಯೋಜನೆಯಾಗಿ ರಾಷ್ಟ್ರೀಯ ಸಮಾಜ ಕಲ್ಯಾಣ ಮಂಡಳಿಯನ್ನಾಗಿ ಸ್ಥಾಪಿಸಿತು.

ಸಮಾನತೆ, ಸ್ವಾತಂತ್ರ್ಯದ ಹಕ್ಕುಗಳನ್ನು ಮಹಿಳೆಯರು ಪ್ರಶ್ನಿಸಿದರು. ಪ್ರಜಾಪ್ರಭುತ್ವ ಎನಿಸಿರುವ ದೇಶ ತಮ್ಮ ಅರ್ಧಭಾಗದ ಪ್ರಜಾಸಮುದಾಯವನ್ನು ಶೋಚನೀಯ ಪರಿಸ್ಥಿತಿಯಲ್ಲಿ ಇಟ್ಟಿದೆಯಲ್ಲಾ ಇದರಿಂದ ದೇಶ ಅಭಿವೃದ್ಧಿ ಹೊಂದಲು ಸಾಧ್ಯವೇ? 20ನೇ ಶತಮಾನವು ಅಂತ್ಯಗೊಂಡಿರುವ ಈ ಕಾಲದಲ್ಲೂ ಲಿಂಗ ವ್ಯವಸ್ಥೆಯ ನ್ಯಾಯವನ್ನು ಗಳಿಸುವ ಹಾದಿಯಲ್ಲಿ ನಾವಿನ್ನೂ ಆಕ್ರಮಿಸುವ ಪ್ರಮಾಣ ಅಗಾಧವಾಗಿದೆ ಎಂದು ಹೇಳಿಕೊಳ್ಳಬೇಕಿದೆ.

ಮುಖ್ಯವಾಗಿ ಇಂದು ಮಹಿಳೆ ಸ್ವಾತಂತ್ರ್ಯದ ಹಕ್ಕು ಅವಶ್ಯವಾಗಿದೆ. ಅಂದರೆ ಅಭಿವ್ಯಕ್ತಿಸುವ, ಸಭೆ ಸೇರುವ, ಒಕ್ಕೂಟ ರಚಿಸುವ, ಪ್ರವಾಸ, ನಿವಾಸದ ಆಯ್ಕೆ, ಆಸ್ತಿ ಮತ್ತು ಉದ್ಯೋಗ ಆಯ್ಕೆಯಲ್ಲಿ ಸ್ವಾತಂತ್ರ್ಯದ ಹಕ್ಕು ಅವಳಾದಾಗಬೇಕು. ಇದರಿಂದ ಅವಳ ವ್ಯಕ್ತಿಗತ ಬೆಳವಣಿಗೆಗೆ, ಸಂತೋಷಕ್ಕೆ ಸಹಕಾರಿಯಾಗುತ್ತದೆ. ಮಹಿಳೆಗೆ ಸಿಗಬೇಕಾದ ಈ ರೀತಿಯ ಸ್ವಾತಂತ್ರ್ಯದ ಹಕ್ಕು ಇನ್ನೂ ಬಂದಿಲ್ಲ. ಸಿಗಬೇಕಾದರೆ ಅದಕ್ಕೆ ಅವಕಾಶ ಮಾಡಿಕೊಳ್ಳುವವಳು, ಅವಕಾಶ ಕೊಡಬೇಕಾದದ್ದು ಮಹಿಳೆಯೇ ಆಗಿದ್ದಾಳೆ.

ಸ್ವತಂತ್ರ ಜೀವನದ ಕುರಿತು ಹೆಣ್ಣಿಗೆ ಮೊದಲು ಕಲಿಸಿಕೊಡಬೇಕಾದದ್ದು ತಾಯಿ. ಅವಳಿಂದಲೇ ಸ್ವತಂತ್ರ ವಾತಾವರಣದ ಪರಿಕಲ್ಪನೆ ಮೂಡಿಬರಬೇಕು. ಹಿಂದಿನ ಪರಿಸ್ಥಿತಿಗಳಿಗೆ ಹೋಲಿಸಿದರೆ ಇಂದು ಮಹಿಳೆಗೆ ಸ್ವಲ್ಪಮಟ್ಟಿನ ಸ್ವಾತಂತ್ರ್ಯದ ಹಕ್ಕಿದೆ ಎನ್ನಬಹುದು. ಅದು ನಗರ ಜೀವನದ ಮಹಿಳೆಯರಲ್ಲಿ ಸಾಧ್ಯ. ಶೇಕಡ 80ರಷ್ಟು ಮಹಿಳೆಯರು ಸ್ವಾತಂತ್ರ್ಯದ ಹಕ್ಕನ್ನು ತಾವೇ ಕಂಡುಕೊಂಡಿದ್ದಾರೆ. ಆದರೆ ಹಳ್ಳಿ ಹೆಂಗಸರು ಮನೆಯ ಒಳಗೂ ಸಹ ಸ್ವಾತಂತ್ರ್ಯ ಹಕ್ಕಿನ ನೆಲೆಯನ್ನು ಹೊಂದುವ ಸಾಮರ್ಥ್ಯವನ್ನೇ ಪಡೆದುಕೊಳ್ಳಬೇಕಾಗಿದೆ.

ಪ್ರತಿಯೊಬ್ಬ ಮಹಿಳೆ ತನಗೆ ಸರಿ ಎನಿಸಿದ್ದನ್ನು ಮಾಡುವಂತಿರಬೇಕು. ಆ ನಿಲುವಿಗೆ ಯಾವುದೇ ಬಂಧನವಿರಬಾರದು. ಆಗ ಮಾತ್ರ ನಿಜವಾದ ಸ್ವಾತಂತ್ರ್ಯದ ಹಕ್ಕು ದೊರಕಿದಂತೆ. ಅದಕ್ಕೊಂದು ಮಹತ್ವ ಸಿಗುತ್ತದೆ. ಆದರೆ ಇಂದು ಕೆಲವು ಸಾಮಾಜಿಕ ಕಟ್ಟುಪಾಡುಗಳಿಂದ ಅದು ಸಿಗುತ್ತಿಲ್ಲ. ಇದಕ್ಕೆ ರಾಷ್ಟ್ರಮಟ್ಟದಿಂದಲೇ ಇನ್ನೂ ಹಲವಾರು ರೀತಿ ಕಾರ್ಯಯೋಜನೆಗಳನ್ನು ಜಾರಿಗೊಳಿಸಬೇಕು. ಹೆಣ್ಣಿನ ಸ್ವಾತಂತ್ರ್ಯದ ಹಕ್ಕಿನಲ್ಲಿ ಇನ್ನೂ ಸಾಧಿಸಲಾರದ ಒಂದು ವ್ಯವಸ್ಥೆ ಎಂದರೆ ರಾತ್ರಿಯಲ್ಲ, ಹಗಲೂ ಸಹ ಹೆಣ್ಣು ಒಂಟಿಯಾಗಿ, ತಲೆ ಎತ್ತಿ ಓಡಾಡಲೂ ಆಗದ ಸ್ಥಿತಿಯಾಗಿದೆ. ಮಹಿಳೆಯನ್ನು ಕೇವಲ ಲೈಂಗಿಕ ದೃಷ್ಟಿಕೋನದಿಂದ ನೋಡುವ ಮನೋಭಾವನೆ ಜಾಸ್ತಿಯಾಗುತ್ತಿರುವುದು. ಕಾರಣ ಇದನ್ನು ಹೋಗಲಾಡಿಸಬೇಕಾದರೆ, ಹೆಣ್ಣಿನಲ್ಲಿಯೂ ಸಹ ಕೆಲವು ಬದಲಾವಣೆಗಳಾಗಬೇಕು. ಆಗ ಮಹಿಳೆಯನ್ನು ನೋಡುವ ಲೈಂಗಿಕ ದೃಷ್ಟಿಯ ಮನೋಭಾವನೆ ಬದಲಾವಣೆಯಾಗಬೇಕು. ನಂತರ ಮಹಿಳೆ ಸ್ವಾತಂತ್ರ್ಯ ಹಕ್ಕನ್ನು ಹೊಂದಲು ಸಾಧ್ಯವಾಗಬಹುದು. ಸ್ವಾತಂತ್ರ್ಯದ ಹಕ್ಕನ್ನೂ ಸಹ ಮಹಿಳೆಯರು ಅಭಿವೃದ್ಧಿಗೆ ಪೂರಕವಾಗಿ ಬಳಸಿಕೊಳ್ಳಬೇಕು.

ನಮ್ಮ ದೇಶ ಬ್ರಿಟಿಷ್‌ರಿಂದ ಮುಕ್ತವಾದ ಬಳಿಕದ ಆರ್ಥಿಕ ಅಭಿವೃದ್ಧಿಯ ಅರ್ಧ ಶತಕವೇ ಕಳೆದರೂ ಬಹುಪಾಲು ಮಹಿಳೆಯರ ಬದುಕಿನಲ್ಲಿ ನಿರೀಕ್ಷಿತ ಬದಲಾವಣೆಗಳು ಕಾಣಲಿಲ್ಲ. ಇದಕ್ಕೆ ಮುಖ್ಯ ಕಾರಣ ಅಭಿವೃದ್ಧಿಯ

ಫಲದ ಹಂಚಿಕೆಯಲ್ಲಿ ಮಹಿಳೆಯರಿಗೆ ಸೂಕ್ತ ಪಾಲು ದೊರೆಯದಿರುವುದು. ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಆರ್ಥಿಕ ಸ್ವಾವಲಂಬನೆಯಿಲ್ಲದೆ ಮಹಿಳೆಯರ ಸ್ಥಿತಿ ಶೋಚನೀಯವಾದುದರ ವಿರುದ್ಧದ ಹೋರಾಟದಲ್ಲಿ ಬಿಡುಗಡೆಯ ಸ್ಪಷ್ಟ ಹಾದಿಗಳು ಗೋಚರಿಸುತ್ತಿರುವುದು ಸತ್ಯವಾದರೂ ಮಹಿಳೆಯರ ಆತಂಕದ ಸ್ಥಿತಿ ದೂರವಾದ ದಿನಗಳು ಇನ್ನೂ ಬಂದಂತಿಲ್ಲ. ಗಣನೀಯ ಪ್ರಮಾಣದಲ್ಲಿ ಹೆಚ್ಚುತ್ತಿರುವ ಲಿಂಗ ಅನುಪಾತ ಮುಂದೊಂದು ದಿನ ಹೆಣ್ಣು ಮಕ್ಕಳಿಗೆ ಬೇಡಿಕೆ, ಪೂರೈಕೆ ಲೆಕ್ಕಾಚಾರದಲ್ಲಿ ಬಂದೊದಗುವ ಗಂಡಾಂತರದ ಸೂಚನೆಯನ್ನು ಕೊಡುತ್ತಿದೆ. ಅಲ್ಲದೆ, ಕೊಳ್ಳುವ ಸಂಸ್ಕೃತಿಯ, ಸರಕು ಮಾರಾಟ, ಲಾಭಗಳೇ ಮುಖ್ಯವಾಗಿರುವ ವ್ಯಾಪಾರಿ ಲೋಕದಲ್ಲಿ ಹೆಣ್ಣು ಜಾಹೀರಾತು, ಮನೋರಂಜನೆಗಳ ಹೆಸರಿನಲ್ಲಿ ಶೋಷಣೆಗೆ ಒಳಗಾಗುತ್ತಿರುವುದು ಆತಂಕಕಾರಿ ಬೆಳವಣಿಗೆ. ಈ ರೀತಿಯ ಶೋಷಣೆ ವಿರುದ್ಧದ ಸಂರಕ್ಷಣೆ ಹಕ್ಕು ಎಲ್ಲರಿಗೂ ಅವಶ್ಯ. ಕಾಲ್‌ಸೆಂಟರ್‌ನಲ್ಲಿ ಉದ್ಯೋಗ ಮಾಡಬೇಕಾದ ಹೆಣ್ಣು ಮಕ್ಕಳಿಗೆ ರಕ್ಷಣೆಯ ಕೊರತೆ, ಒಂಟಿ ಹೆಣ್ಣಿನ ಮೇಲೆ, ಅಪ್ರಾಪ್ತ ಬಾಲಕಿಯರ ಮೇಲೆ, ವೃದ್ಧೆಯರ ಮೇಲೆ ಅತ್ಯಾಚಾರ ಪ್ರಕರಣಗಳೇ ಮೂಕ ಸಾಕ್ಷಿಗಳಾಗಿವೆ. ಸರಕಾರ, ಸಮಾಜ, ಕಾನೂನು ಹಿತಚಿಂತಕರು ಎಲ್ಲರ ನೆರವಿನಿಂದ ಇಂದು ಮಹಿಳಾ ಸಂರಕ್ಷಣೆ ಹಕ್ಕು ದಕ್ಕಬೇಕಾಗಿದೆ. ಈ ರೀತಿಯ ಕಾನೂನಿನ ಅರಿವು ಮೂಡಿಸಿಕೊಳ್ಳುವ ಅಗತ್ಯ ಇಂದಿನ ಮಹಿಳೆಯರ ಮುಂದಿರುವ ಸವಾಲಾಗಿದೆ. ಇದರಿಂದ ಆಕೆಯಲ್ಲಿ ಆತ್ಮವಿಶ್ವಾಸ, ಛಲ, ಉನ್ನತ ಆಲೋಚನೆಗಳು ಮೂಡುತ್ತವೆ. ಆಗ ತನ್ನನ್ನು ತಾನು ಸಂರಕ್ಷಿಸಿಕೊಳ್ಳುವ ಹಕ್ಕನ್ನು ಸಹ ಪಡೆಯುತ್ತಾಳೆ.

ಸ್ವತಂತ್ರ ಭಾರತದಲ್ಲಿ ಮಹಿಳೆಗೆ ಕಾನೂನಿನ ಅಡಿಯಲ್ಲಿ ಸಂವಿಧಾನಬದ್ಧವಾಗಿ ಸಮಾನತೆ, ಸ್ವಾತಂತ್ರ್ಯವನ್ನು ಮೂಲಭೂತ ಹಕ್ಕನ್ನಾಗಿ 1950ರಲ್ಲೇ ನೀಡಲಾಗಿದೆ. 1975ನ್ನು ಇಡೀ ವಿಶ್ವವೇ ಮಹಿಳಾ ವರ್ಷವನ್ನಾಗಿ ಆಚರಿಸಿತು. ಆ ನಿಟ್ಟಿನಲ್ಲಿ ಭಾರತ ಸಹ ಅನೇಕ ಅಂತಾರಾಷ್ಟ್ರೀಯ ಒಪ್ಪಂದಗಳಲ್ಲಿ ಮುಂಚೂಣಿ ರಾಷ್ಟ್ರವಾಗಿ ಮಹಿಳಾಪರ ಒಪ್ಪಂದಗಳಿಗೆ ಸಹಿ ಹಾಕಿದೆ. ಅದರಲ್ಲೂ ಮುಖ್ಯವಾಗಿ "ಮಹಿಳಾ ವಿರುದ್ಧದ ಪಕ್ಷಪಾತಿ ವೇದಿಕೆ ನಿರ್ಮೂಲನೆ"ಗಾಗಿ 1993ರಲ್ಲಿ ಭಾರತ ಒಪ್ಪಿಗೆ ನೀಡಿದೆ. ಹಾಗೊಮ್ಮೆ ಅವಲೋಕಿಸಿದರೆ ಸ್ವಾತಂತ್ರ್ಯಪೂರ್ವದಲ್ಲಿ ಬೇರು ಬಿಟ್ಟಿದ್ದ ಸತಿಪದ್ಧತಿ, ಬಾಲ್ಯವಿವಾಹ, ವಿಧವಾ ವಿವಾಹದ ಬಗೆಗೆ ತಿರಸ್ಕಾರ, ಬಾಲಕಿಯರ ಶಿಕ್ಷಕ್ಕೂ ಅಸಡ್ಡೆ, ದೇವದಾಸಿ ಪದ್ಧತಿ ಇವೇ ಮುಂತಾದ ಪಿಡುಗು ಸಂಪೂರ್ಣವಾಗಿ ಮಾಯವಾಗದಿದ್ದರೂ ಅವುಗಳನ್ನು ಕಾನೂನಿನ ಅಡಿಯಲ್ಲಿ ನಿಷೇಧಿಸಲಾಗಿದೆ. ಇನ್ನೂ ಅನೇಕ ರೀತಿಯ ಸುಧಾರಣೆ ಕೈಗೊಂಡು ಸರ್ಕಾರ ಆ ದಿಕ್ಕಿನೆಡೆ ಕಾರ್ಯೋನ್ಮುಖವಗಿ ತೊಡಗಿದರೆ ಮಾತ್ರ ಮಹಿಳೆಯ ಸಮಸ್ಯೆಗಳಿಂದ, ಶೋಷಣೆಗಳಿಂದ ಮುಕ್ತಳಾಗಬಹುದು.

ಒಟ್ಟಿನಲ್ಲಿ ಭಾರತದ ಮಹಿಳೆಯರ ಬದುಕಿನ ಬವಣೆಯು ತುಂಬಾ ಶೋಚನೀಯವಾದದ್ದು. ಹೇಗೆಂದರೆ–

1. ಶಿಕ್ಷಣದಿಂದ ವಂಚಿತರಾದ ಅತಿ ಹೆಚ್ಚು ಕೂಲಿಕಾರ್ಮಿಕ ಹೆಣ್ಣು ಮಕ್ಕಳು, ಈ ಸಂಖ್ಯೆ ಹೆಚ್ಚಿರುವುದು ಭಾರತದಲ್ಲೇ.
2. ಭಾರತೀಯ ಸಂವಿಧಾನ ಪ್ರಾಥಮಿಕ ಶಿಕ್ಷಣ ಕಡ್ಡಾಯವೆಂದು ಘೋಷಿಸಿದ್ದರೂ ಶಿಕ್ಷಿತ ಮಹಿಳೆಯರು ಶೇಕಡ 39 ಇದ್ದರೆ, ಪುರುಷರು ಶೇಕಡ 54 ರಷ್ಟಿದ್ದಾರೆ.

3. ಬೆಳೆದ ಹೆಣ್ಣು ಮಕ್ಕಳ 'ಶೀಲರಕ್ಷಣೆ'ಯೊಂದು ಸದ್ಯದ ಸಮಾಜದಲ್ಲಿ ಪೋಷಕರನ್ನು ಕಾಡುವ ವಿಷಯ. ಇದರಿಂದ ಗ್ರಾಮೀಣ ಪ್ರದೇಶದ ಹೆಣ್ಣು ಮಕ್ಕಳಿಗೆ ಶಿಕ್ಷಣದ ಕೊರತೆ.

4. ದೇಶದಲ್ಲಿ ಪ್ರತಿ 34 ನಿಮಿಷಕ್ಕೊಂದು ಅತ್ಯಾಚಾರ, 42 ನಿಮಿಷಕ್ಕೊಂದು ಲೈಂಗಿಕ ದೌರ್ಜನ್ಯ, 43 ನಿಮಿಷಕ್ಕೊಂದು ಅಪಹರಣ ಹಾಗೂ 93 ನಿಮಿಷಕ್ಕೊಂದು ವರದಕ್ಷಿಣೆ ಸಾವಿಗೆ ಮಹಿಳೆ ಈಡಾಗುತ್ತಿದ್ದಾಳೆ.

5. ಭಾರತದಲ್ಲಿನ 1.5 ಕೋಟಿ ಹೆಣ್ಣು ಶಿಶುಗಳಲ್ಲಿ ಶೇಕಡ 25ರಷ್ಟು ಮಕ್ಕಳು ತಮ್ಮ 15ನೇ ಹುಟ್ಟು ಹಬ್ಬ ಕಾಣುವುದಿಲ್ಲ. ಪ್ರತಿ ವರ್ಷ 50 ಲಕ್ಷ ಗರ್ಭಪಾತ ಮಾಡಲಾಗುತ್ತಿದೆ. ಅಪೌಷ್ಠಿಕತೆ, ಅನಾರೋಗ್ಯ, ಹೆರಿಗೆ ಮುಂತಾದ ಎಚ್ಚರಿಕೆ, ಚೇತರಿಕೆಗಳನ್ನು ತಡೆಯಬಹುದಾದ ಸಮಸ್ಯೆ ಅವಳನ್ನು ಸಾವಿಗೊಳಮಾಡಿದೆ.

6. ಪುರುಷರ ಆರೋಗ್ಯಕ್ಕೆ ಸಿಗುವ ಜವಾಬ್ದಾರಿ ಮಹಿಳೆಗೆ ಸಿಗುತ್ತಿಲ್ಲ.

ಇವುಗಳೆಲ್ಲದರಿಂದ ಆಕೆಗೆಯನ್ನು ಬಿಡುಗಡೆಗೊಳಿಸಿ ಸುಧಾರಣೆಗೆ ಅವಕಾಶ ನೀಡಿದರೆ ಅವಳಿಗೆ ಆರ್ಥಿಕ ಸ್ವಾತಂತ್ರ್ಯ ದೊರಕಿ, ಉದ್ಯೋಗ ಕೈಗೊಂಡು ತನ್ನ ಹಾಗೂ ಮಕ್ಕಳ ಆರೋಗ್ಯ ಶಿಕ್ಷಣಕ್ಕೆ ಗಮನ ಕೊಡುತ್ತಾಳೆ. ಸಾಮಾಜಿಕ ಸ್ಥಾನಮಾನ ಅಂತಸ್ತು ಹೆಚ್ಚಿ ಅವಳ ಅಭಿಪ್ರಾಯಕ್ಕೆ ಮನ್ನಣೆ ಸಿಗುತ್ತದೆ. ಅನ್ಯಾಯದ ವಿರುದ್ಧ ದನಿ ಎತ್ತುತ್ತಾಳೆ. ಆಗ ಮಾತ್ರ ಮಾರ್ಚ್ 8 ವಿಶ್ವ ಮಹಿಳಾ ದಿನ, ತಾಯಂದಿರ ದಿನಗಳಿಗೆ ಮಹತ್ವವನ್ನು ಕಂಡುಕೊಳ್ಳಲು ಸಾಧ್ಯ. ಹಾಗೂ ದೇಶದಲ್ಲೆಲ್ಲಾ ಅರ್ಧದಷ್ಟಿರುವ ಮಹಿಳೆಗೆ ಬದುಕಲು ಇರುವ ಹಕ್ಕುಗಳನ್ನು ಸೂಕ್ತವಾದ ರೀತಿ ದೊರೆಯದಿದ್ದರೆ ಯಾವುದೇ ಸಮಾಜ, ರಾಜ್ಯ, ರಾಷ್ಟ್ರ ಅಭಿವೃದ್ಧಿ ಹೊಂದಲು, ಸಾರ್ಥಕ್ಯ ಪಡೆಯಲು ಸಾಧ್ಯವಿಲ್ಲದಂತಾಗುತ್ತದೆ. ಆದ್ದರಿಂದ ಆಕೆಗಿರುವ ಕಾನೂನುಬದ್ಧ ಹಕ್ಕುಗಳನ್ನು ಸರ್ಕಾರ ನೀಡುವಲ್ಲಿ ಕಾರ್ಯೋನ್ಮುಖವಾಗಲಿ ಎನ್ನುವುದೇ ನನ್ನ ಆಶಯವಾಗಿದೆ.

# ಅನುಬಂಧಗಳು

# ಗ್ರಂಥ ಋಣ

## ಆಕರ ಗ್ರಂಥಗಳು

1. **ಆಧುನಿಕ ಭಾರತದಲ್ಲಿ ಮಹಿಳೆ**

- ಇಂಗ್ಲೀಷ್ ಮೂಲ - ಜೆರಾಲ್ಡಿನ್ ಪೋರ್ಟ್‌ಬ್ಸ್
- ಕನ್ನಡಕ್ಕೆ ಡಾ॥ ಎಚ್.ಎಸ್. ಶ್ರೀಮತಿ, ಪ್ರಕಟಣಾ ವಿಭಾಗ, ಪ್ರಸಾರಾಂಗ, ಕನ್ನಡ ವಿ.ವಿ.

2. **ಜನಸಾಮಾನ್ಯರಿಗಾಗಿ ಕಾನೂನು ಮಾಹಿತಿ**

- ಸಂಪಾದಕರು, ಅರಳಿ ನಾಗರಾಜು, ಕರ್ನಾಟಕ ರಾಜ್ಯ ಕಾನೂನು ಸೇವೆಗಳ ಪ್ರಾಧಿಕಾರ, ಬೆಂಗಳೂರು - 560027.

3. **ಭಾರತದ ಸಂವಿಧಾನ**

- ಎಂ.ಎಂ. ಬಡ್ಡಿ, ಎಂ.ಆರ್. ಸತ್ಯನಾರಾಯಣ, ಆಳಕವಾಡಿ, ಧಾರವಾಡ-01.

4. **ಭಾರತೀಯ ಸಮಾಜದ ಅಧ್ಯಯನ**

- ರವೀಂದ್ರ ಕೊಪ್ಪರ್, ಸುರೇಶ್ ಪಬ್ಲಿಕೇಷನ್ಸ್, ಗದಗ - 582101.

5. **ಮಹಿಳಾ ಚಳುವಳಿ ಸಾಮಾಜಿಕ ಮತ್ತು ಸಾಂಸ್ಕೃತಿಕ ಹಿನ್ನೆಲೆ**

- ಹಾಲತಿ ಸೋಮಶೇಖರ್, ವಿಸ್ಮಯ ಪ್ರಕಾಶನ, ಕುವೆಂಪುನಗರ, ಮೈಸೂರು - 570023.

6. **ಮಹಿಳೆ ಮತ್ತು ಆಸ್ತಿಯ ಹಕ್ಕಿಗೆ ಸಂಬಂಧಿಸಿದ ಸಲಹೆಗಳು**

- ಹೇಮಲತಾ ಮಹಿಷಿ, ಸಾಧನ ಪ್ರಕಾಶನ, ಬೆಂಗಳೂರು.

## ಪರಾಮರ್ಶನ ಗ್ರಂಥಗಳು

1. **ಗ್ರಾಮೀಣ ಅಭಿವೃದ್ಧಿಯಲ್ಲಿ ಗ್ರಾಮಸಭೆ ಮತ್ತು ಗ್ರಾಮ ಪಂಚಾಯಿತಿಗಳ ಪಾತ್ರ**

- ಚಂದ್ರಶೇಖರ್, ವಿನುತ ಪಬ್ಲಿಕೇಷನ್ಸ್, ಭದ್ರಾವತಿ - 577301.

2. **ನಮ್ಮ ಕಾನೂನುಗಳು, ಮಹಿಳೆಯ ಹಕ್ಕುಗಳು**

- ಕರ್ನಾಟಕ ಸರ್ಕಾರ, ಮಹಿಳೆಯರ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಭಾಗ 1, 6, 7

3. **ಮಹಿಳಾ ಅಧ್ಯಯನದ ತಾತ್ವಿಕ ನೆಲೆಗಳು ಮತ್ತು ಮಹಿಳಾ ಚಳುವಳಿಗಳು**

- ಪ್ರೀತಿ ಶುಭಚಂದ್ರ, ಪ್ರಸರಾಂಗ, ಕನ್ನಡ ವಿ.ವಿ. ಹಂಪಿ - 583276.

4. **ಮಹಿಳಾ ಅಧ್ಯಯನದ ಪದಕೋಶ**

– ಒಡೆಯರ್ ಡಿ. ಹೆಗ್ಗಡೆ, ಗುಪ್ತ ಆಫ್‌ಸೆಟ್, ಮೈಸೂರು.

5. **ಮಹಿಳೆ ಬಿಡುಗಡೆಯ ಹಾದಿಯಲ್ಲಿ**

– ಎನ್. ಗಾಯಿತ್ರಿ, ನವಕರ್ನಾಟಕ ಪ್ರಕಾಶನ, ಬೆಂಗಳೂರು.

6. **ಮಹಿಳೆ ಮತ್ತು ಆಸ್ತಿಯ ಹಕ್ಕು**

– ಕೆ. ಪದ್ಮಾವತಮ್ಮ, ಕನ್ನಡ ಸಾಹಿತ್ಯ ಪರಿಷತ್, ಪ್ರಕಟ –ಬೆಂಗಳೂರು.

7. **ಮಹಿಳೆ ಮತ್ತು ಅಭಿವೃದ್ಧಿ**

–ಸಂಪಾದಕರು, ಜಯಶೀಲ, ಶೌಕತ್‌ಹಾಲಿ, ಮೇಗಲಮನಿ, ಸುಧಾಕರ್ ಎಸ್.
ಕಿಸಾನ್ ಪಬ್ಲಿಕೇಷನ್ಸ್, ಮಂಗಳೂರು–15.

8. **ಮಹಿಳಾ ಸಾಮಾಜಿಕತೆ**

– ಜ್ಯೋತಿ ಶಶಿಕುಮಾರ್, ಕನ್ನಡ ವಿ.ವಿ. ಹಂಪಿ.

9. **ಮಹಿಳೆ ಮತ್ತು ಕೌಟುಂಬಿಕ ಹಿಂಸೆ**

– ಆರ್. ಇಂದಿರಾ, ಶ್ರೀಮತಿ ಯಶೋಧ ರಾಘವ್ ಟ್ರಸ್ಟ್, ಮೈಸೂರು.

10. **ಮಹಿಳೆ, ಸಮಾಜ ಮತ್ತು ಸಂಸ್ಕೃತಿ**

– ಆರ್. ಇಂದಿರಾ, ಕನ್ನಡ ವಿ.ವಿ., ಹಂಪಿ.

11. **ಮಹಿಳಾ ಅಧ್ಯಯನಗಳು, ಆರ್ಥಿಕ ನೆಲೆಗಳು ಮತ್ತು ಆಯಾಮಗಳು**

– ಒಡೆಯರ್ ಡಿ.ಹೆಗ್ಗಡೆ, ಎನ್. ಅನ್ನಪೂರ್ಣೇಶ್ವರಿ, ಮಾನವ ಅಭಿವೃದ್ಧಿ ಕೇಂದ್ರ, ಮೈಸೂರು.

12. **ಮಹಿಳಾ ಹಕ್ಕುಗಳು**

– ಒಡೆಯರ್ ಡಿ.ಹೆಗ್ಗಡೆ, ಎನ್. ಅನ್ನಪೂರ್ಣೇಶ್ವರಿ, ಗುಪ್ತ ಆಫ್‌ಸೆಟ್, ಮೈಸೂರು.

13. **ಮಹಿಳೆ, ಸಾಹಿತ್ಯ, ಸಮಾಜ**

– ವಿಜಯಾ ದಬ್ಬೆ, ರಚನಾ ಪ್ರಕಾಶನ, ಬೆಂಗಳೂರು.

14. **ಮಹಿಳೆ ಮತ್ತು ಮಾನವತೆ**

– ವಿಜಯಾ ದಬ್ಬೆ, ಶ್ರೀಮತಿ ಯಶೋಧರಾಗೌ ಟ್ರಸ್ಟ್.

15. **ಮಹಿಳೆ ಮತ್ತು ಸಮೂಹ ಮಾಧ್ಯಮಗಳು**

– ಡಾ॥ ಕೆ. ಸರೋಜಾ, ಪ್ರಸಾರಾಂಗ, ಕನ್ನಡ ವಿ.ವಿ. ಹಂಪಿ.

16. **ಮಾನವ ಹಕ್ಕುಗಳು**

– ಶ್ರೀ ಕೆ.ಎಸ್. ಪ್ರಭು, ಯು.ಕೆ. ಲಾ ಹೌಸ್, ಅರವಿಂದನಗರ, ಹುಬ್ಬಳ್ಳಿ–24.

17. ಮಾನಸ (ಮಾನಪತ್ರಿಕೆ), ಮಾನಸ ತಿಂಗಳ ಪತ್ರಿಕೆ,

- ಪಂಚಾಯಿತಿ ರಸ್ತೆ, ಕಾಡುಗೋಡಿ ಪೋಸ್ಟ್, ಬೆಂಗಳೂರು.

18. ವಿಜಯಕರ್ನಾಟಕ ಪತ್ರಿಕೆಯ ಮಹಿಳಾ ವಿಜಯದ 2008ರ ಜೂನ್ 17, 24, ಜುಲೈ 1, 8, 15ರ ಶಾಲಿನಿ ರಜನೀಶ್ ಲೇಖನಗಳು.

19. ಸಮಾಜಶಾಸ್ತ್ರ

- ಎಂ. ನಾರಾಯಣ ವಿಶ್ವ, ಚೇತನ್ ಬುಕ್‌ಹೌಸ್, ಮೈಸೂರು.

20. **WOMEN AND LAW IN INDIA**

- Nomita Aggarwal, New Century Publications, Delhi - 11033.